ಮಾನವಾನಾಮಿತಿ॥ ಕಶ್ಯಪಸ್ಯ ಆತ್ಮಜಾತ್ ಪುತ್ರಾತ್, ಆದಿತ್ಯಾತ್ಸೂರ್ಯಾತ್ ॥ನಿ॥ ಸೂರಸೂರ್ಯಾರ್ಯ ಮಾದಿತ್ಯೇತ್ಯಮರಃ। ಮಾನವಾನಾಂಮನುಷ್ಯಾಣಾಂ, ಪಿತಾಜನಕಃ, ಮಹಾನ್‌ಶ್ಚಾಸೌ ಪ್ರಾಜ್ಞಃ ಪಂಡಿತಶ್ಚಮಹಾಪ್ರಾಜ್ಞಃ 'ಪರಮ ಧಾರ್ಮಿಕಃ' ಇತ್ಯಾದಾವಿವ ಮಹತ್ವಂ ಪ್ರಜ್ಞಯೈವ ಪರ್ಯವಸ್ಯತಿ। ಏತಸ್ಯ ಮನ್ವಂತರಸ್ಯ ಮನೋಃರಂತರಸ್ಯ ಭುಕ್ತಿಕಾಲಸ್ಯ ಈಶ್ವರಃ, ಮನುರ್ನಾಮ ವೈವಸ್ವತ ಮನುರಿತಿ ಪ್ರಸಿದ್ಧಃ ಶ್ರಾದ್ಧದೇವಃ ಜಜ್ಞೇ ಅಜಾಯತ॥೧೨॥

**ಮಾನವಾನಾಂ ಪಿತಾ ಜಜ್ಞೇ ಆದಿತ್ಯಾಕಶ್ಯಪಾತ್ಮಜಾತ್।**
**ಮನುರ್ನಾಮ ಮಹಾಪ್ರಾಜ್ಞ ಏತನ್ಮನ್ವಂತರೇಶ್ವರಃ॥೧೨॥**

ಅರ್ಥ:- ಕಶ್ಯಪ, ಆತ್ಮಜಾತ್ = ಕಶ್ಯಪರ, ಮಗನಾದ. ಆದಿತ್ಯಾತ್ = ಸೂರ್ಯನ ದೆಸೆಯಿಂದ ಮಾನವಾನಾಂ = ಮನುಷ್ಯರಿಗೆ. ಪಿತಾ = ತಂದೆಯಾದ ಮಹಾಪ್ರಾಜ್ಞಃ = ದೊಡ್ಡಜ್ಞಾನಿಯಾದ. ಏತತ್, ಮನು, ಅಂತರ, ಈಶ್ವರಃ = ಈ (ದೈವತಾಖ್ಯನಾದ), ಮನುವಿನ, ಭುಕ್ತಿಕಾಲಕ್ಕೆ ಸ್ವಾಮಿಯಾದ. ಮನುಃ, ನಾಮ = (ವೈವಸ್ವತ) ಮನುವೆಂತ, ಪ್ರಸಿದ್ಧರು (ಶ್ರಾದ್ಧದೇವನು) ಜಜ್ಞೇ = ಹುಟ್ಟಿದನು ॥ ೧೨॥

ತಸ್ಯೇತಿ॥ ಕ್ಷುವತಃ ಕ್ಷುತಂ ಕುರ್ವತಃ, ತಸ್ಯಮನೋಃ ಘ್ರಾಣಾತ್ ನಾಸಾಪುಟಾತ್, ಶ್ರೀಮಾನ್ ಇಕ್ಷ್ವಾಕುಃ, ಅಭೂತ್. ಲುಙ್॥ಸ ಇಕ್ಷ್ವಾಕುಃ ತಪಃ ಉಪವಾಸಾದಿ ವ್ರತಂ, ತಪ್ತ್ವಾ ಕೃತ್ವಾ. ವಿರಿಂಚಾದ್ಬ್ರಹ್ಮಣಃ, ರಂಗಸ್ಯ ರಂಗಾಖ್ಯವಿಮಾನ ಸ್ಥಾನಸ್ಯ, ಈಶ್ವರಂ ಸ್ವಾಮಿನಂ, ಹರಿಂ ನಾರಾಯಣಂ, ಲೇಭೇಪ್ರಾಪ। ಡುಲಭಷ್ ಪ್ರಾಪ್ತೌ-ಧಾ.ಸ.ಕ.ಕರ್ತರಿ.ಲಿಟ್.ಆತ್ಮ.ಪ್ರ.ಏ॥ ಆದೌ ಬ್ರಹ್ಮತಪೋಲಬ್ಧಂ ರಂಗವಿಮಾನಂ ಲಬ್ಧುಂ ವಸಿಷ್ಠೇನೋಪದಿಷ್ಟ ಇಕ್ಷ್ವಾಕುಃ ಬ್ರಹ್ಮಾಣಂ ಪ್ರತಿ ತಪಸ್ತೇಪೇ. ತತ್ತಪ ಸ್ತುಷ್ಟಶ್ಚತುರ್ಮುಖಃ

ಲೋಕಾನಾಂ ತಪ ಚ ಮುಕ್ತಯೇ ಹರೀಚ್ಛಾನು ರೋಧೇ ನಮಯಾದತ್ತಮಿದಂ ವಿಮಾನಂ ಅಯೋಧ್ಯಾಯಾಂ ಅರ್ಚಯನ್ನಾಸ್ವ. ತದ್ವಂಶ ಭವೋ ರಾಮಃ ವಿಭೀಷಣಾಯೇದಂ ದಾಸ್ಯತಿ. ಸಚೇದಂ ನಯಮಾನಃ ಚೋಳೇಷ್ವಿದಂ ಸ್ಥಾಪಯಿಷ್ಯತಿ. ತತಶ್ಚೋಳೈರಭ್ಯರ್ಚ್ಯಯಿಷ್ಯಮಾಣ ಮಿದಂ ಕ್ರಮೇಣ

ಮಾಮುಪ್ಯೇಷ್ಯತಿ' ಇತ್ಯಭಿದಾಯ ವಿಮಾನಮಿಕ್ಷ್ವಾಕವೇ ಪ್ರಾದಾದಿತ್ಯಾದಿ ಶ್ರೀರಂಗ ಮಾಹತ್ಮ್ಯೇ ಸ್ಫುಟಮ್॥೧೩॥

**ತಸ್ಯ ಘ್ರಾಣಾದಭೂಚ್ಛ್ರೀಮಾನಿಕ್ಷ್ವಾಕುಃ ಕ್ಷುವತೋಮನೋಃ।**
**ತಪಸ್ತಪ್ತ್ವಾ ವಿರಿಂಚಾತ್ಸಲೇಭೇ ರಂಗೇಶ್ವರಂ ಹರಿಮ್॥೧೩॥**

ಅರ್ಥ:- ಕ್ಷುವತಃ = ಸೀನುತ್ತಿರುವ. ತಸ್ಯ = ಅಂಥಾ ಮನೋಃ = ವೈವಸ್ವತ ಮನುವಿನ ಘ್ರಾಣಾತ್ = ಮೂಗಿನ ದೆಸೆಯಿಂದ ಶ್ರೀಮಾನ್ = ಸಂಪತ್ತುಳ್ಳ. ಇಕ್ಷ್ವಾಕುಃ = ಇಕ್ಷ್ವಾಕು ರಾಜನು. ಅಭೂತ್ = ಹುಟ್ಟಿದನು. ಸಃ = ಆ ಇಕ್ಷ್ವಾಕು ರಾಜನು ತಪಃ = ತಪಸ್ಸನ್ನು ತಪ್ತ್ವಾ = ಮಾಡಿ. ವಿರಿಂಚಾತ್ = ಬ್ರಹ್ಮದೇವರ ದೆಸೆಯಿಂದ ರಂಗ, ಈಶ್ವರಂ = ರಂಗವಿಮಾನಕ್ಕೆ, ಸ್ವಾಮಿಯಾದ. ಹರಿಂ = ನಾರಾಯಣ ದೇವರನ್ನು. ಲೇಭೇ = ಹೊಂದಿದನು ॥೧೩॥

ವಿಕುಕ್ಷಿರಿತಿ॥ ತಸ್ಯ ಇಕ್ಷ್ವಾಕೋಃ ವಿಕುಕ್ಷಿಃ ಸಮಭೂತ್ ಅಜಾಯತ। ವಿಕುಕ್ಷಿಸ್ತುಗಭೂದಿತಿ ಪಾಠೇ ತುಕ್ ಪುತ್ರ ಇತ್ಯರ್ಥಃ। ಸ ಇಕ್ಷ್ವಾಕು ಸಂಬಂಧಿ ತ್ವಾದಿನಾ ಪ್ರಸಿದ್ಧಶ್ಚಾಸಾವನ್ವಯಃ ವಂಶಸ್ಥ ತಸ್ಮಿನ್, ಪುರಂಜಯಃ ಪುರೋಗಮಃ ಅಗ್ರೇಸರಃ ಯೇಷಾಂತೇ, ಶೂರಾಪರಾಕ್ರಮಿಣಃ ರಾಜಾನಶ್ಚೇತಿ ಋಷಯೋ ಜ್ಞಾನಿನಶ್ಚತೇ, ಪರೇ ಅನ್ಯೇ ವ್ಯಜಾಯಂತ। ಜನಿಪ್ರಾದುರ್ಭಾವೇಧಾ. ಅಕ.ಕರ್ತರಿ.ಲಟ್.ಆತ್ಮ.ಪ್ರಬ॥೧೪॥

**ವಿಕುಕ್ಷಿಸ್ಸಮಭೂತ್ತಸ್ಯ ಪುರಂಜನ ಪುರೋಗಮಾಃ।**
**ತದನ್ವಯೇ ವ್ಯಜಾಯಂತ ಶೂರಾ ರಾಜರ್ಷಯಃಪರೇ॥೧೪॥**

ಅರ್ಥ:- ತಸ್ಯ = ಆ ಇಕ್ಷ್ವಾಕು ರಾಜಗೆ. ವಿಕುಕ್ಷಿಃ = ವಿಕುಕ್ಷಿ ರಾಜನು. ಸಮಭೂತ್ = ಹುಟ್ಟಿದನು. ತತ್, ಅನ್ವಯೇ = ಆ (ಇಕ್ಷ್ವಾಕ್ವಾದಿ ಸಂಬಂಧಿಯಾದ ಕಾರಣ) ಪ್ರಸಿದ್ಧವಾದ, ವಂಶದಲ್ಲಿ. ಪುರಂಜಯಃ, ಪುರೋಗಮಾಃ = ಪುರಂಜಯ ರಾಜನೇ, ಅಗ್ರಗಾಮಿಯಾಗಿವುಳ್ಳಂಥಾ, ಶೂರಾಃ = ಪರಾಕ್ರಮವಂತರಾದ ರಾಜ, ಋಷಯಃ = ಅರಸರೂ, ಜ್ಞಾನಿಗಳೂ ಆದಂಥಾ. ಪರೇ = ಮತ್ತು ಕೆಲವರು ವ್ಯಜಾಯಂತ = ಹುಟ್ಟಿದರು.

ತಸ್ಮಿನ್ನಿತಿ॥ ತಸ್ಮಿನ್ ಸೂರ್ಯ ಸಂಬಂಧಿತ್ವೇನ ಪ್ರಸಿದ್ಧವಂಶೇ ಅತ್ಯಂತಂ ಭಾಗ್ಯಮೈಶ್ವರ್ಯ ಮಸ್ಯಾಸ್ತೀತಿ ತಥೋಕ್ತಃ, ದಶರಥಃ ಬಭೂವ। ದಶದಿಕ್ಷುರಥೋ ಯಸ್ಯ ಸ ಇತಿ ಶಾಕ ಪಾರ್ಥಿವಾದಿ ಸಮಾಸಾಶ್ರಯಣೇನಾನ್ವರ್ಥೇಯಂ ಸಂಜ್ಞಾ। ಸಃ ದಶರಥಃ ವೈಮಾನಿಕ ವಿಮಾನೇ ಭವಂ, ವಿಷ್ಣುಂ ರಂಗನಾಥಂ, ಅರ್ಚನ್ ಪೂಜಯನ್ ಸನ್ ಅರ್ಚಪೂಜಾಯಾ ಮಿತಿಭ್ವಾದವೌ ಪಠಿತ ಸ್ಯೇದಂ ರೂಪಂ, ನತು ಚುರಾದೌ ಪಠಿತಸ್ಯ। ತೇ ನಾರ್ಚಯನ್ನಿತಿ ಭಾವ್ಯಮಿತಿ ನ ಶಂಕ್ಯಮ್। ಮಹತೀಂ ವಿಶಾಲಾಂ, ಮಹೀಂ ಭೂಮಿಂ, ರರಕ್ಷಅಪಾತ್। ರಕ್ಷಪಾಲನೇ-ಧಾ.ಸಕ.ಕರ್ತರಿ.ಲಟ್.ಪರ.ಪ್ರ.ಏ॥೧೫॥

**ತಸ್ಮಿನ್ ವಂಶೇ ದಶರಥೋ ಬಭೂವಾತ್ಯಂತ ಭಾಗ್ಯವಾನ್।**
**ಸೋಽರ್ಚನ್ ವೈಮಾನಿಕಂ ವಿಷ್ಣುಂ ರರಕ್ಷಮಹಿತೀಂ ಮಹೀಮ್॥೧೫॥**

ಅರ್ಥ:- (ಸೂರ್ಯ ಸಂಬಂಧಿಯಾಗಿ) ಪ್ರಸಿದ್ಧವಾದ. ವಂಶೇ = ವಂಶದಲ್ಲಿ ಅತ್ಯಂತ, ಭಾಗ್ಯವಾನ್ = ಅತ್ಯಂತವಾಗಿ, ಐಶ್ವರ್ಯವುಳ್ಳವನಾದ. ದಶರಥಃ = ದಶರಥ ರಾಜನು. ಬಭೂವ = ಹುಟ್ಟಿದನು. ಸಃ = ಆ ದಶರಥ ರಾಜನು ವೈಮಾನಿಕಂ = ವಿಮಾನದಲ್ಲಿರುವ. ವಿಷ್ಣುಂ = ರಂಗನಾಥ ದೇವರನ್ನು ಅರ್ಚನ್ (ಸನ್) = ಪೂಜಿಸುವನಾಗಿ. ಮಹತೀಂ = ದೊಡ್ಡದಾದ ಮಹೀಂ = ಭೂಮಿಯನ್ನು. ರರಕ್ಷ = ರಕ್ಷಿಸಿದನು ॥೧೫॥

ತಸ್ಮಿನ್ ಕಾಲ ಇತಿ॥ ತಸ್ಮಿನ್ ದಶರಥ ರಾಜ್ಯ ಸಂಬಂಧಿನಿ ಕಾಲೇ, ಸರ್ವೇಸುರಾಃ ದೇವಾಃ ಮಹದ್ಭಿಃ ಬಲಾಧಿಕ್ಯೈಃ ರಾಕ್ಷಸ್ಯೈ ರಾವಣಾದಿಭಿಃ ಪೀಡಿತಾಸ್ಸಂತಃ, ದುಗ್ಧಾಬ್ಧೌಕ್ಷೀರ ಸಮುದ್ರೇ ಶೇತ ಇತಿ ತಥೋಕ್ತಂ, ಶರಣ್ಯಂ ಶರಣೇ ಸಾಧುಂ, ವಿಷ್ಣುಂ, ಶರಣಂ,ಯಯುಃ ಪ್ರಾಪುಃ। ಯಾಪ್ರಾಪಣೇ-ಧಾ.ಸಕ.ಕರ್ತರಿ.ಲಟ್.ಪರ.ಪ್ರ.ಬ.॥೧೬॥

**ತಸ್ಮಿನ್ ಕಾಲೇ ಸುರಾಸ್ಸರ್ವೇ ಮಹಾರಾಕ್ಷಸ ಪೀಡಿತಾಃ।**
**ದುಗ್ಧಾಬ್ಧಿಶಾಯಿನಂ ವಿಷ್ಣುಂ ಶರಣ್ಯಂ ಶರಣಂ ಯಯುಃ॥೧೬॥**

ಅರ್ಥ:- ತಸ್ಮಿನ್ = ಆ ದಶರಥ ರಾಜ್ಯ ಸಂಬಂಧಿಯಾದ ಕಾಲೇ = ಕಾಲದಲ್ಲಿ ಸರ್ವೇ = ಸಮಸ್ತರಾದ. ಸುರಾಃ = ದೇವತೆಗಳು. ಮಹಾ, ರಾಕ್ಷಸ, ಪೀಡಿತಾಃ

(ಸಂತಃ) = ಬಲಾಧಿಕರಾದ, ರಾಕ್ಷಸರಿಂದ, ಬಾಧಿತರಾಗಿ, ದುಗ್ಧಾಬ್ಧಿಶಾಯಿನಂ = ಕ್ಷೀರ ಸಮುದ್ರದಲ್ಲಿ, ಶಯನ ಮಾಡಿರುವ, ಶರಣ್ಯಂ = ಮೊರೆ ಹೋಗಲಿಕ್ಕೆ ಅರ್ಹನಾದ. ವಿಷ್ಣುಂ = ನಾರಾಯಣ ದೇವರನ್ನು ಶರಣಂ = ಮೊರೆಯನ್ನು. ಯಯುಃ = ಹೊಂದಿದರು. ॥೧೬॥

ತ ಇತಿ॥ ತೇದೇವಾಃ, ಶ್ರಿದಿಯಾ ಲಕ್ಷ್ಮ್ಯಾಃ, ಪತ್ಯಾಭತ್ರಾ ಹರಿಣಾ ಆದಿಷ್ಟಾಃ ಭುವ್ಯವತಾರಾಯಾಜ್ಞಾಪಿ ತಾಸ್ಸಂತಃ, ಕ್ಷಿತೇರ್ಭೂಮೇರ್ಮಂಡಲೇ ಶಾಖಾಮೃಗಃ ಕಪಿರಾದಿರ್ಯಸ್ಯ ತಥಾ ವಿಧಶ್ಚಾಸೌ ಭಾವೋಜನ್ಮ ಚ ತೇನ ಶಾಖಾಮೃಗಾದೀನಾಂ ಭಾವೇನ ಧರ್ಮೇಣ ಕಪಿತ್ವಾದಿನಾ ವಾಜಜ್ಞಿರೇ ಜಾತಾಃ। ಮಾರುತಃ ವಾಯುಃ ಹನುಮಾನ್ ತನ್ನಾಮಕಃ, ಅಭವತ್॥೧೭॥

**ತ ಆದಿಷ್ಟಾ ಶ್ರಿಯಃ ಪತ್ಯಾ ಜಜ್ಞಿರೇ ಕ್ಷಿತಿ ಮಂಡಲೇ।**
**ಶಾಖಾಮೃಗಾದಿ ಭಾವೇನ ಹನುಮಾನ್ ಮಾರುತೋಽಭವತ್॥೧೭॥**

ಅರ್ಥ:- ತೇ = ಆ ದೇವತೆಗಳು. ಶ್ರಿಯಃ = ಲಕ್ಷ್ಮೀದೇವಿಯರಿಗೆ ಪತ್ಯಾ = ಗಂಡನಾದ ನಾರಾಯಣ ದೇವರಿಂದ. ಆದಿಷ್ಟಾಃ (ಸಂತಃ) = ಆಜ್ಞಪ್ತರಾಗಿ, ಕ್ಷಿತಿ, ಮಂಡಲೇ = ಭೂಮಿಯ, ಪ್ರದೇಶದಲ್ಲಿ. ಶಾಖಾಮೃಗ, ಆದಿ, ಭಾವೇನ = ಕಪ್ರಿಯೇ, ಮೊದಲಾಗಿವುಳ್ಳ, ಜನ್ಮದಿಂದ ಜಜ್ಞಿರೇ = ಹುಟ್ಟಿದರು. ಮಾರುತಿಃ = ವಾಯು ದೇವರು. ಹನುಮಾನ್ = ಹನುನ್ನಾಮಕರು. ಅಭವತ್ = ಆದರು.

ಅಭಯಾಯೇತಿ॥ ತತಃ ದೇವಾವತಾರಾನಂತರಂ, ಹರಿಃ, ಸತಾಂ ಸಾಧೂನಾಂ ಅಭಯಾಯ ಭಯಾಭಾವಾಯ ಮುಕ್ತಯೇ, ರಾಕ್ಷಸಾನಾಂ ರಾವಣಾದೀನಾಂ ಹತ್ಯೈ ಸಂಹಾರಾಯ ನಿರಯ ಪ್ರಾಪಣಾಯ ಚ , ರಾಮ ಇತಿ ನಾಮ ಯಸ್ಯಸ ತಥೋಕ್ತಸ್ಸನ್, ಕೌಸಲ್ಯಾಯಾಂ ತನ್ನಾಮ್ನೀಂ ದಶರಥ ಜೇಷ್ಠಭಾರ್ಯಾಯಾಂ ಅಜಾಯತ ಆವಿರಭೂತ್॥೧೮॥

**ಅಭಯಾಯ ಸತಾಂ ಹತ್ಯೈ ರಾಕ್ಷಸಾನಾಂ ತತೋ ಹರಿಃ।**
**ರಾಮನಾಮಾ ದಶರಥಾತ್ ಕೌಸಲ್ಯಾಯಾ ಮಜಾಯತ॥೧೮॥**

ಅರ್ಥ:- ತತಃ = ದೇವತಾವತಾರಾ ನಂತರದಲ್ಲಿ. ಹರಿಃ = ನಾರಾಯಣದೇವರು. ಸತಾಂ = ಸಜ್ಜನರಿಗೆ. ಅಭಯಾಯ = ಭಯಪರಿಹಾರಕ್ಕೋಸ್ಕರ. ರಾಕ್ಷಸಾನಾಂ = ರಾಕ್ಷಸರಿಗೆ. ಹತ್ಯೈ = ನಾಶಕ್ಕೋಸ್ಕರವೂ. ರಾಮ, ನಾಮಾ (ಸನ್) = ರಾಮನೆಂತ ಹೆಸರುಳ್ಳವರಾಗಿ. ದಶರಥಾತ್ = ದಶರಥ ರಾಜನ ದೆಸೆಯಿಂದ ಕೌಸಲ್ಯಾಯಾಂ = ಕೌಸಲ್ಯದೇವಿಯಲ್ಲಿ. ಅಜಾಯತ = ಪ್ರಾದುರ್ಭವಿಸಿದರು. ॥೧೮॥

ತತ ಇತಿ॥ ತತೋ ರಾಮಾವತಾರಾ ನಂತರಂ, ನೃಪಾತ್ ದಶರಥಾತ್ ಲಕ್ಷ್ಮಣಃ ಶತೃಘ್ನಶ್ಚೇತ್ಯೇತೌ, ಸುಮಿತ್ರಾಯಾಂ ದ್ವಿತೀಯಾಯಾಂ ದಶರಥ ಭಾರ್ಯಾಯಾಂ ಬಭೂವತುಃ ಜಾತೌ। ಸದಾ ಶುಭೇ ಮಂಗಲೇರತಃ, ಭರತಃ, ಕೈಕಯ್ಯಾಂ ಕೇಕೇಯ ರಾಜ ಪುತ್ರ್ಯಾಂ ದಶರಥಪತ್ನ್ಯಾಂ, ನೃಪಾತ್, ಜಜ್ಞೇ। ಅತ್ರಪಾಯಸ ವಿಭಾಗ ಕ್ರಮೇಣ ಸುಮಿತ್ರಾಯಾಂ ಪುತ್ರದ್ವಯಸ್ಯ ಇತರಯೋಶ್ಚೈಕಕಸ್ಯ ಚ ಜನನ ಮನ್ಯತೋಽ ವ ಸೇಯಮ್॥೧೯॥

**ತತೋ ಲಕ್ಷ್ಮಣ ಶತೃಘ್ನೌ ಸುಮಿತ್ರಾಯಾಂ ಬಭೂವತುಃ।**
**ಕೈಕಯ್ಯಾಂ ಭರತೋ ಜಜ್ಞೇ ಸದಾ ಶುಭರತೋನೃಪಾತ್॥೧೯॥**

ಅರ್ಥ:- ತತಃ ರಾಮಾವತಾರಾ ನಂತರದಲ್ಲಿ. ನೃಪಾತ್ = ದಶರಥ ರಾಜನ ದೆಸೆಯಿಂದ. ಲಕ್ಷ್ಮಣ, ಶತೃಘ್ನೌ = ಲಕ್ಷ್ಮಣ ದೇವರು, ಶತ್ರುಘ್ನನು ಇವರುಗಳು. ಸುಮಿತ್ರಾಯಾಂ = ಸುಮಿತ್ರಾ ದೇವಿಯಲ್ಲಿ ಬಭೂವತುಃ = ಹುಟ್ಟಿದರು. ಸದಾ = ಸರ್ವಕಾಲದಲ್ಲಿ ಶುಭ, ರತಃ = ಮಂಗಳದಲ್ಲಿ, ಆಸಕ್ತನಾದ ಭರತಃ = ಭರತನು ಕೈಕಯ್ಯಾಂ = ಕೈಕಯೀ ದೇವಿಯಲ್ಲಿ ನೃಪಾತ್ = ದಶರಥ ರಾಜನ ದೆಸೆಯಿಂದ. ಜಜ್ಞೇ = ಹುಟ್ಟಿದನು ॥೧೯॥

ಅಭ್ಯವರ್ಧಂತೇತಿ। ಸಮ್ಯಂಚಃ ಶುಭಾಃ, ಸುಕುಮಾರಕಾಃ ಕೋಮಲಾಃ ಕುಮಾರಾಃ ಬಾಲಾಃ, ಅಭ್ಯವರ್ಧಂತ। ವೃಧುವರ್ಧನೇ-ಧಾ.ಅಕ.ಕರ್ತರಿ.ಲಙ್.ಆತ್ಮ ಪ್ರ.ಬ.॥ ಪಿತಾ ದಶರಥಃ, ಚತುರೈಃ ನಿಪುಣೈಃ, ಚತುರ್ಭಿಃ ಪುತ್ರೈಃ, ಅರ್ಥೈಃ ಧರ್ಮಾರ್ಥಕಾಮಮೋಕ್ಷೈರಿವ, ನಿರ್ಬಭೌ ರರಾಜ। ಭಾ ದೀಪ್ತೌ- ಧಾ.ಅಕ.ಕರ್ತರಿ ಲಟ್-ಪರ.ಪ್ರ.ಏ। ಅತ್ರ ಪುತ್ರಾಣಾಮರ್ಥೈಸ್ಸಾಮ್ಯಂ ಚತುಷ್ಟ್ವೇ ನೋಕ್ತಮಿತಿ ಪೂರ್ಣೋಪಮಾಲಂಕಾರಃ॥೨೦॥

**ಅಭ್ಯವರ್ಧಂತ ಸಮ್ಯಂಚಃ ಕುಮಾರಸ್ಸು ಕರಮಾರಕಾಃ।**
**ಚತುರ್ಭಿಃಶ್ಚತುರ್ಯೈಃ ಪುತ್ರೈಃ ಪಿತಾರ್ಥೈರಿವ ನಿರ್ಬಭೌ॥೨೦॥**

ಅರ್ಥ:- ಸಮ್ಯಂಚಃ = ಶುಭಕರರಾದ. ಸುಕುಮಾರಕಾಃ = ಕೋಮಲಾದ ಕುಮಾರಾಃ = ಬಾಲಕರು. ಅಭ್ಯವರ್ಧಂತ = ಬೆಳೆದರು. ಪಿತಾ = ತಂದೆಯಾದ ದಶರಥ ರಾಜನು ಚತುರ್ಯೈಃ = ನಿಪುಣರಾದ. ಚತುರ್ಭಿಃ = ನಾಲ್ಕು ಮಂದಿಗಳಾದ ಪುತ್ರೈಃ = ಮಕ್ಕಳಂದ ಅರ್ಥೈರಿವ = (ಧರ್ಮಾರ್ಥ ಕಾಮ ಮೋಕ್ಷಗಳೆಂಬ) ಪುರುಷಾರ್ಥಗಳಂದಲೋಪಾದಿಯಲ್ಲಿ. ನಿರ್ಬಭೌ = ಪ್ರಕಾಶಿಸಿದನು ॥೨೦॥

ವಿಶ್ವಾಮಿತ್ರ ಇತಿ॥ ತತಃ ಕುಮಾರಾಭಿವೃದ್ಧಿ ಸಮನಂತರಂ ವಿಶ್ವಸ್ಯ ಮಿತ್ರಂ ಸುಹೃದ್ವಿಶ್ವಾಮಿತ್ರ ನಾಮಾಮುನಿಃ॥ಸೂ॥ ಮಿತ್ರೇ ಚರ್ಷಾವಿತಿ ವಿಶ್ವಶಬ್ದಾಂತ್ಯಾಚೋದೀರ್ಘಃ॥ ಮಿತ್ರ ಶಬ್ದಸ್ಯ 'ಪುಲ್ಲಿಂಗ ತಾತು ಆಂಗಮ ಶಿಷ್ಯಂ ಲೋಕಾಶ್ರಯತ್ವಾತ್' ಇತಿ ಭಾಷ್ಯ ವಚನಾನುಸಾರಿಣೇ। ಯಜ್ಞಂ ಸ್ವೇನಕ್ರಿಯಮಾಣಂ ನಿಘ್ನತಃ ನಾಶಯತಃ, ಕ್ರೀತಾದಿಷು ನಿಷಿದ್ಧಷಷ್ಟೀಕಾನಾಂ ಗಮ್ಯಾ ದೀನಾ ಮುಪಸಂಖ್ಯಾನ ಸ್ಯಾಭುಪಗತತ್ವಾನ್ನ ಸಮಾಸಾನುಪಪತ್ತಿಃ। ರಾಕ್ಷಸಾನಾಮೀಶ್ವರಾನ್, ನಿಹಂತುಂ, ನಾಥಂ ಸ್ವಾಮಿನಂ ಸಲಕ್ಷ್ಮಣಂ ರಮಂತ ಇತಿ ರಾಮಾಣಾಂ ಮುಕ್ತಾನಾಂ ದೇವಂ ಸ್ತುತ್ಯಂ ರಾಮಂ ಅನಯತ್ ಸ್ವಾಶ್ರಮಂ ಪ್ರತೀತಿ ಶೇಷಃ। ನೀಙ್ ಪ್ರಾಪಣೇ-ಧಾ.ದ್ವಿಕ.ಕರ್ತರಿ.ಲಙ್.ಪರ.ಪ್ರ.ಏ॥೨೧॥

**ವಿಶ್ವಾಮಿತ್ರ ಸ್ತತೋಯಜ್ಞ ನಿಘ್ನತೋರಾಕ್ಷಸೇಶ್ವರಾನ್।**
**ನಿಹಂತುಮನಯನ್ನಾಥಂ ರಾಮದೇವಂ ಸಲಕ್ಷ್ಮಣಮ್॥೨೧॥**

ಅರ್ಥ:- ಕುಮಾರಾಭಿವೃಧ್ಯ ನಂತರದಲ್ಲಿ. ವಿಶ್ವಾಮಿತ್ರಃ = ವಿಶ್ವಾಮಿತ್ರರು ಯಜ್ಞ ನಿಘ್ನತಃ = (ತಾವು ಮಾಡುವ) ಯಜ್ಞವನ್ನು ಕೆಡಿಸುವ ರಾಕ್ಷಸೇಶ್ವರಾನ್ = ರಾಕ್ಷಸಾಧಿಪತಿಗಳನ್ನು. ನಿಹಂತುಂ = ಸಂಹರಿಸುವುದಕ್ಕೋಸ್ಕರ. ನಾಥಂ = ಸ್ವಾಮಿಯಾದ. ಸಲಕ್ಷ್ಮಣಂ = ಲಕ್ಷ್ಮಣ ದೇವರಿಂದ ಸಹಿತರಾದ. ರಾಮ, ದೇವಂ = ಮುಕ್ತರಿಗೆ, ಸ್ತುತ್ಯರಾದ ರಾಮ ದೇವರನ್ನು (ಸ್ವಾಶ್ರಮಂ ಪ್ರತಿ = ತಮ್ಮ ಆಶ್ರಮವನ್ನು ಕುರಿತು). ಅನಯತ್ = ಕರೆದುಕೊಂಡು ಹೋದರು. ॥೨೧॥

ಅಟವ್ಯಾಮಿತಿ॥ ಸ ರಾಮಃ ಅಟವ್ಯಾಂ ತಾಟಕಾಂ ಹತ್ವಾ, ಯಜ್ಞಸ್ಯ ವಿಶ್ವಾಮಿತ್ರ ಸಂಬಂಧಿನೌ ವಿಘ್ನಾನ್ವಿಘಾತುಕಾನ್ ಸುಬಾಹ್ವಾದೀಂಶ್ಚ ವಿಧೂಯ ತಿರಸ್ಕೃತ್ಯ, ಸಿದ್ಧಾಶ್ರಮಂ ತಪಸ್ಸಿದ್ಧ ಜನಾಧ್ಯುಷಿತ ತ್ವೇನ ತನ್ನಾಮಕಾಶ್ರಮಂ ಏಯಿವಾನ್ ಪ್ರಾಪ್ತಸ್ಸನ್ ಇಣಃ ಕ್ವಸುಃ। ವಿದೇಹವಿಷಯಂ ವಿದೇಹಾಖ್ಯ ನೃಪಪಾಲಿತ ದೇಶಮ್ ಯಯೌ ಪ್ರಾಪ॥೨೨॥

**ಅಟವ್ಯಾಂ ತಾಟಕಾಂ ಹತ್ವಾ ಸ ಸಿದ್ಧಾಶ್ರಮಮೇಯಿವಾನ್।**
**ವಿಧೂಯ ಯಜ್ಞ ವಿಘ್ನಾಂಶ್ಚ ವಿದೇಹ ವಿಷಯಂ ಯಯೌ॥೨೨॥**

ಅರ್ಥ:- ಸಃ = ಆ ರಾಮ ದೇವರು. ಅಟವ್ಯಾಂ = ಅರಣ್ಯದಲ್ಲಿ ತಾಟಕಾಂ = ತಾಟಕೆಯನ್ನು ಹತ್ವಾ = ಸಂಹರಿಸಿ. ಯಜ್ಞ, ವಿಘ್ನಾಂಶ್ಚ = ಯಜ್ಞಕ್ಕೆ ಪ್ರತಿಬಂಧಕರಾದ ರಾಕ್ಷಸರನ್ನು ವಿಧೂಯ = ನಾಶ ಮಾಡಿ. ಸಿದ್ಧಾಶ್ರಮಂ = ಸಿದ್ಧಾಶ್ರಮವನ್ನು. ಏಯಿವಾನ್ (ಸನ್) = ಹೊಂದಿದವರಾಗಿ. ವಿದೇಹ, ವಿಷಯಂ = ವಿದೇಹರಾಜನ, ದೇಶವನ್ನು ಯಯೌ = ಹೊಂದಿದರು.

ರಾಜೇತಿ॥ ಅಥ ಮಿಥಿಲಾಪ್ರವೇಶಾ ನಂತರಂ ರಾಜಾದ್ಯೈ ಜನಕಾದಿಭಿಃ ಪೂಜಿತಃ ಸ ರಾಮಃ ಐಶ್ವರಂ ಈಶ್ವರ ಸ್ಯ ಸಂಬಂಧಿ ಧನುಃ ವಿಭಜ್ಯ ಭಂಕ್ತ್ವಾ ಸುರೇಶ್ವರೈರ್ದೇವ ಶ್ರೇಷ್ಠೈಃ ಉಚ್ಚೈಃ ರಾಧಿಕ್ಯೇನ ಸ್ತೂಯಮಾಣ ಸ್ಸನ್ ಜಾನಕೀಂ ಸೀತಾಂ ಅಲಭಿಷ್ಟ ಪ್ರಾಪ। ಲುಙ್। ಅಸ್ಯ 'ಡುಲಭಷ್ಪ್ರಾಪ್ತೌ' ಇತಿ ಭ್ವಾದಿ ಪಠಿತಾದಸ್ಯ ತ್ವಾನೇಟ್ತ್ವಾನು ಪಪತ್ತಿಃ॥೨೩॥

**ರಾಜಾದ್ಯೈಃ ಪೂಜಿತಸ್ಸೋಽಥವಿಭಜ್ಯ ಧನುರೈಶ್ವರಮ್।**
**ಜಾನಕೀ ಮಲಭಿಷ್ಟೋಚ್ಚೈಃ ಸ್ತೂಯಮಾನಸ್ಸುರೇಶ್ವರೈಃ॥೨೩॥**

ಅರ್ಥ:- ಅಥ = ಮಿಥಿಲಾ ಪ್ರವೇಶಾ ನಂತರದಲ್ಲಿ ರಾಜ. ಆದ್ಯೈಃ = ಜನಕರಾಜನು ಮೊದಲಾಗಿವುಳ್ಳವರಿಂದ ಪೂಜಿತಃ = ಮಾನಿಸಲ್ಪಟ್ಟ ಸಃ = ರಾಮದೇವರು ಐಶ್ವರಂ = ರುದ್ರ ಸಂಬಂಧಿಯಾದ ಧನುಃ = ಧನುಸ್ಸನ್ನು ವಿಭಜ್ಯ = ಮುರಿದು ಸುರೇಶ್ವರೈಃ = ದೇವಶ್ರೇಷ್ಠರಿಂದ ಉಚ್ಚೈಃ = ಅಧಿಕವಾಗಿ ಸ್ತೂಯಮಾನಃ (ಸನ್) ಸ್ತುತಿ

ಮಾಡಿಸಿಕೊಳ್ಳಲ್ಪಟ್ಟವರಾಗಿ ಜಾನಕೀಂ = ಜನಕ ಪುತ್ರಿಯಾದ ಸೀತಾದೇವಿಯನ್ನು ಅಲಭಿಷ್ಟ = ಹೊಂದಿದರು ॥೨೩॥

ಗಚ್ಛನ್ನಿತಿ॥ ದೇವ್ಯಾಸೀತಯಾ ಸಹ ಆಯೋಧ್ಯಾಂ ಸ್ವ ಪುರೀಂ ಗಚ್ಛನ್, ವಸಿಷ್ಠೇನ ಸಹಿತ:, ಅನುಜೇನಲಕ್ಷ್ಮಣೇನ ಸಹಿತಃ ಸ ರಾಮಃ ಕವಿರ್ಬೃಹಸ್ಪತಿಃ ಕಾವ್ಯಶ್ಶುಕ್ರಶ್ಚೇತ್ಯೇ ತಾಭ್ಯಾಂ ಯುತೇನ ಯುಕ್ತೇನ ಜ್ಯೋತ್ಸ್ನಾಶ್ಚಂದ್ರಿಕಾಯಾಃ ಕಾಂತೇನ ಪ್ರಿಯೇಣ ಚಂದ್ರೇಣ ತುಲ್ಯಂ। ಸೂ_ತೇನ ತುಲ್ಯಂ ಕ್ರಿಯಾಚೇದ್ವತಿರಿತಿವತಿಃ। ವ್ಯರೋಚತ ಅರಾಜತ। ರುಚ ದೀಪ್ತೌ-ಧಾ.ಅ ಕ. ಕರ್ತರಿ. ಲಜ್ ಆತ್ಮ ಪ್ರ.ಏ॥ ಕವಿ ಶಬ್ದಃ ಕ ವೃ ವ ರ್ಣನ ಇತ್ಯತೋಣಿ ಜಂತಾತ್ ಕವತೀತಿ ಯೋಗೇನ ವಾ, ಏತತ್ಪದ ಸ್ತ ಸ್ಯೈವ ಭಾಗವತ ತಾತ್ಪರ್ಯೇ ಆಚಾರ್ಯ್ಯೈಃ ಕೃತ ವ್ಯಾಖ್ಯಾನಾನು ಸಾರಿ ರೂಢ್ಯಾವಾ ಬೃಹಸ್ಪತಿ ವಾಚಕ ಇತಿ ಬೋಧ್ಯಮ್॥ ಅತ್ರ ತುಲ್ಯಾರ್ಥೇ ವಿಧೀಯಮಾನೇ ನವತಿನಾ ಸಾದೃಶ್ಯ ಪ್ರತ್ಯಾಯನಾದಾರ್ಥೀ ಪೂ ರ್ಣೋಪಮಾ ॥೨೪॥

**ಗಚ್ಛನ್ ದೇವ್ಯಾಸಹಾಯೋಧ್ಯಾಂ ಸವಸಿಷ್ಠಸ್ಸಹಾನುಜಃ।**
**ಕವಿಕಾವ್ಯಯುತ ಜ್ಯೋತ್ಸ್ನಾಕಾಂತ ವತ್ಸ ವ್ಯರೋಚತ॥೨೪॥**

ಅರ್ಥ:- ದೇವ್ಯಾ = ಸೀತಾದೇವಿಯಿಂದ. ಸಹ = ಕೂಡಿ. ಅಯೋಧ್ಯಾ = ಅಯೋಧ್ಯಾ ಪಟ್ಟಣವನ್ನು ಕುರಿತು. ಗಚ್ಛನ್ = ಹೋಗುವ ಸುವಶಿಷ್ಠಃ = ವಸಿಷ್ಠರಿಂದ ಸಹಿತರಾದ. ಸಹಾನುಜಃ = ತಮ್ಮನಾದ ಲಕ್ಷ್ಮಣ ದೇವರಿಂದ ಸಹಿತರಾದ ಸಃ = ಆರಾಮ ದೇವರು. ಕವಿ, ಕಾವ್ಯ, ಯುತ, ಜ್ಯೋತ್ಸ್ನಾ ಕಾಂತವತ್ = ಬೃಹಸ್ಪತ್ಯಾಚಾರ್ಯರು, ಶುಕ್ರಾಚಾರ್ಯರು = ಇವರಿಂದ ಯುಕ್ತನಾದ ಬೆಳದಿಂಗಳಿಗೆ, ಸ್ವಾಮಿಯಾದ ಚಂದ್ರನೋಪಾದಿಯಲಿ ವ್ಯರೋಚತ = ಪ್ರಕಾಶಿಸಿದರು. ತಾತ್ಪರ್ಯ = ರಾಮದೇವರು ಚಂದ್ರನಂತೇ ಸೀತಾ ದೇವಿಯು ಬೆಳದಿಂಗಳಂತೆ, ವಸಿಷ್ಠರು ಬೃಹಸ್ಪತಿಯಂತೆ, ಲಕ್ಷ್ಮಣರು ಶುಕ್ರಾಚಾರ್ಯರಂತೆ ಹೋಗುವ ಕಾಲದಲ್ಲಿ ಒಪ್ಪಿದರು ॥೨೪॥

ಪ್ರವಿಶ್ಯೇತಿ॥ ಸುಖಮಾನಂದಶ್ಚಿತ್ ಜ್ಞಾನಂ ಚೇತ್ಯೈತೇ ಏವ ತನುಶ್ಶರೀರಂ ಯಸ್ಯ ಸಃ ರಾಮಃ, ನಗರೀ ಮಯೋ ಧ್ಯಾಂ, ಪ್ರವಿಶ್ಯ, ತತ್ರ ಸ್ವಪುರೇ, ಪಿತರಂ ದಶರಥಂ, ತಥಾತದ್ವದೇವ ಮಾತ್ರೂಃ ಕೌಸಲ್ಯಾದೀಂಶ್ಚ ಪ್ರವಂದ್ಯನತ್ವಾ ಪೌರೈಃ ಪುರವಾಸಿಭಿಃ

ಪೂಜಿತಸ್ಸನ್ ರೇಮೇ ಕ್ರೀಡೇ। ರಮುಕ್ರೀಡಾಯಾಂ-ಧಾ.ಅಕ.ಕರ್ತರಿ.ಲಟ್.ಆತ್ಮಪ್ರ.ಏ। ಪೂಜಿತಸ್ಸರ್ವೈರಿತ್ಯಪಿ ಕ್ವಚಿತ್ ಪಾಠಃ॥೨೫॥

**ಪ್ರವಿಶ್ಯನಗರೀಂ ತತ್ರ ಪ್ರವಂದ್ಯ ಪಿತರಂತಥಾ।**
**ಮಾತ್ರೂಶ್ಚ ಪೂಜಿತಃ ಪೌರೈಸ್ಸರೇಮೇ ಸುಖಚಿ ತ್ತನುಃ ॥೨೫॥**

ಅರ್ಥ:- ಸುಖ, ಚಿತ್, ತನುಃ = ಆನಂದವು, ಜ್ಞಾನವು -ಇವುಗಳು ಶರೀರವಾಗಿವುಳ್ಳ ಸಃ = ಆ ರಾಮ ದೇವರು. ನಗರೀಂ = ಅಯೋಧ್ಯಾಪುರವನ್ನು ಪ್ರವಿಶ್ಯ = ಪ್ರವೇಶ ಮಾಡಿ. ತತ್ರ = ಅಲ್ಲಿ ಪಿತರಂ = ತಂದೆಯಾದ ದಶರಥ ರಾಜನನ್ನು ಮಾತ್ರೂಶ್ಚ = ತಾಯಿಯವರುಗಳನ್ನೂ ಪ್ರವಂದ್ಯ = ವಂದಿಸಿ ಪೌರೈಃ = ಪುರವಾಸಿ ಜನರಿಂದ ಪೂಜಿತಃ (ಸನ್) = ಮಾನ ಮಾಡಿಸಿಕೊಳ್ಳಲ್ಪಟ್ಟವರಾಗಿ ರೇಮೇ = ಕ್ರೀಡಿಸಿದರು ॥೨೫॥

ರಾಮೇತಿ॥ ದಶರಥಃ ರಾಮಸ್ಯ ರಾಜ್ಯೇ ಅಭಿಷೇಕಾಯ ವಿಧ್ಯುಕ್ತನ್ನಪನಾಯ ಮನಃ ದಧ್ರೇ ದ ಧಾರ॥ ಧ್ರುಜ್‌ಧಾರಣೇ-ಧಾ.ಸಾಕ.ಕರ್ತರಿ.ಲಟ್.ಆತ್ಮಪ್ರ.ಏ॥ ರಾಮಂ ರಾಜ್ಯೇಭಿಷೇಚಯಿತು ಮಿಯೇಷೇತಿಭಾವಃ। ಸತು ರಾಮರಾಜ್ಯಾಭಿಷೇಕಸ್ತು ಕೈಕಯ್ಯಾ ಭರತ ಮಾತ್ರಾ ಮಮಸುತಃ ಗಾಂಭೂಮಿಂ, ಅವೇತ್ ರಕ್ಷತು; ಇತಿ ನಿಜಘ್ನೇ ವಿಘಾತಿತಃ। ಹನ ಸಿಂಹಾಗತ್ಯೋಃ-ಧಾ.ಕರ್ಮ.ಲಟ್.ಆತ್ಮ.ಪ್ರ.ಏ॥೨೬॥

**ರಾಮರಾಜ್ಯಾಭಿಷೇಕಾಯ ದಧ್ರೇ ದಶರಥೋ ಮನಃ।**
**ನಿಜಘ್ನೇ ಸತು ಕೈಕಯ್ಯಾ ಮತ್ಸುತೋಗಾಮವೇದಿತಿ।೨೬॥**

ಅರ್ಥ:- ದಶರಥಃ = ದಶರಥ ರಾಜನು. ರಾಮ, ರಾಜ್ಯ, ಅಭಿಷೇಕಾಯ = ರಾಮ ದೇವರಿಗೆ, ರಾಜ್ಯದಲ್ಲಿ, ಅಭಿಷೇಕಕ್ಕೋಸ್ಕರ ಮನಃ = ಮನಸ್ಸನ್ನು ದಧ್ರೇ = ಧರಿಸಿದನು. ಸತು = ಆ ಅಭಿಷೇಕವಾದರೋ. ಕೈಕಯ್ಯಾ = ಕೈಕಯೀದೇವಿಯಿಂದ ಮತ್, ಸುತಃ = ನನ್ನ ಮಗನು. ಗಾಂ = ಭೂಮಿಯನ್ನು ಅವೇತ್ = ರಕ್ಷಿಸಲಿ. ಇತಿ = ಈ ಪ್ರಕಾರವಾಗಿ ನಿಜಘ್ನೌ = ವಿಘಾತ ಮಾಡಲ್ಪಟ್ಟಿತು. ॥೨೬॥

ರಾಮದೇವ ಇತಿ॥ ರಾಮದೇವಃ, ತತಃ ಸ್ವಪುರಾತ್ ಅಭಿಷೇಕ ವಿಘ್ನಾನ ನಂತರಂವಾ, ಸೀತಾ ಚ ಲಕ್ಷ್ಮಣಶ್ಚೇತೇ ತಾಭ್ಯಾಂ ಸಮನ್ವಿತೋ ಯುಕ್ತಸ್ಸನ್ ಅಶೇಷಾನ್ ಸಮಸ್ತಾನ್, ರಾಕ್ಷಸಾನ್, ಅಪಿ ಸ್ವೇಚ್ಛಯಾ ಪಲಾಯಿತಾನಾಂ ಕಿರ್ಮೀರ ಹಿಡಿಂಬಾದೀನಾಂ ಶರಣಾಗತಾನಾಂ ವಿಭೀಷಣಾದೀನಾಂ ಚ ತ್ಯಾಗಾದಿಭಾವಃ। ವತ್ಸ್ಯನ್ ಹನಿಷ್ಯನ್ ಹಂತುಮಿಚ್ಛನ್ ಸನ್, ವನಂಪ್ರತಿ ಯಯೌ ಜಗಾಮ। ಹಂತುಮಿತಿ, ಧಕ್ಷನ್ನಿ ತ್ಯಪಿ ಕ್ವಚಿತ್ಪಾಠಃ॥೨೭॥

**ರಾಮದೇವ ಸ್ತತ ಸೀತಾ ಲಕ್ಷ್ಮಣಾಭ್ಯಾಂ ಸಮನ್ವಿತಃ।**
**ವನಂ ಪ್ರತಿ ಯಯೌ ವತ್ಸ್ಯನ್ನ ಶೇಷಾನಪಿ ರಾಕ್ಷಸಾನ್॥೨೭॥**

ಅರ್ಥ:- ರಾಮದೇವಃ = ರಾಮದೇವರು. ತತಃ = ತಮ್ಮ ಪಟ್ಟಣದ ದೆಸೆಯಿಂದ (ಅಥವಾ) ಅಭಿಷೇಕ ವಿಘಾತಾ ನಂತರದಲ್ಲಿ. ಸೀತಾಲಕ್ಷ್ಮಣಾಭ್ಯಾಂ = ಸೀತಾ ದೇವಿಯು, ಲಕ್ಷ್ಮಣನು - ಇವರುಗಳಿಂದ. ಸಮನ್ವಿತಃ (ಸನ್) = ಯುಕ್ತರಾಗಿ. ಅಶೇಷಾನ್ = ಸಮಸ್ತರಾದ ರಾಕ್ಷಸಾನ್ = ರಾವಣಾದಿ ರಾಕ್ಷಸರನ್ನು ಅಪಿ = ಸ್ವೇಚ್ಛಾನುಸಾರವಾಗಿ ವತ್ಸ್ಯನ್ (ಸನ್) = ಸಂಹರಿಸುವರಾಗುತ್ತಾ ವನಂಪ್ರತಿ = ವನವನ್ನು ಕುರಿತು ಯಯೌ = ಹೊರಟರು ॥೨೭॥

ಧ್ವಸ್ತೇತಿ॥ ರಾಮಃ ಅನುಅನಂತರಂ ಜನ್ಮ ಜನನಂ ಯಸ್ಯತೇನ ಅವರಜೇನ, ಲಕ್ಷ್ಮಣೇನ, ಲಂಕಾಯಾ ಈಶಸ್ಯ ರಾಜ್ಞೋರಾವಣಸ್ಯ ಭಗಿನೀಂ ಸ್ವಸಾರಂ, ರಾಕ್ಷಸೀಂ ಶೂರ್ಪಣಖಾಂ ಧ್ವಸ್ತಾಛಿನ್ನೌ ಕರ್ಣೌ ಶ್ರೋತ್ರೇ ಯಸ್ಯಾಸ್ತಾಂ, ವಿಗತಾಘೋಣಾ ನಾಸಾ ಯಸ್ಯಾ ಸ್ತಾಂಚ, ಕಾರಯಾ ಮಾಸ ಅಕಾರಯತ್ ॥೨೮॥

**ಧ್ವಸ್ತಕರ್ಣಾಂ ವಿಘೋಣಾಂಚ ಕಾರಮಾಮಾಸ ರಾಕ್ಷಸೀಮ್।**
**ಲಂಕೇಶ ಭಗಿನೀಂ ರಾಮೋ ಲಕ್ಷ್ಮಣೇನಾನು ಜನ್ಮನಾ॥೨೮॥**

ಅರ್ಥ:- ರಾಮಃ = ರಾಮದೇವರು. ಅನುಜನ್ಮನಾ = ತಮ್ಮನಾದ ಲಕ್ಷ್ಮಣೇನ = ಲಕ್ಷ್ಮಣ ದೇವರಿಂದ. ಲಂಕಾ, ಈಶ, ಭಗಿನೀಂ = ಲಂಕಾಪುರಕ್ಕೆ ಸ್ವಾಮಿಯಾದ ರಾವಣನ, ತಂಗಿಯಾದ. ರಾಕ್ಷಸೀಂ = ರಾಕ್ಷಸಿಯಾದ ಶೂರ್ಪಣಖಿಯನ್ನು ಧ್ವಸ್ತ,

ಕರ್ಣಾ೯ಂ = ಛೇದಿಸಲ್ಪಟ್ಟ, ಕಿವಿಗಳುಳ್ಳವಳನ್ನು ವಿಘೋಣಾಂಶ್ಚ = ಮೂಗಿಲ್ಲದವಳನ್ನೂ ಕಾರಯಾ ಮಾಸ = ಮಾಡಿಸಿದರು ॥೨೮॥

ರಾಮೇತಿ॥ ರಾಮೇಣ ವಿಪ್ರಕೃತಿ ಶ್ಯೂರ್ಪಣ ಖಾ ವಿರೂಪೀಕರಣೇ ನಾವ ಮಾನಿತಃ ಕ್ರವ್ಯಂ ಮಾಂಸ ಮತ್ತಿ ಭಕ್ಷಿಯತೀತಿ ಕ್ರ ವ್ಯಾತ್ ರಾಕ್ಷಸಃ ದೂಷಣೇನ ತ ನ್ನಾಮಕೇನ ಬಂಧುನಾ ಸಂಯುತಃ, ಖರಃ ತದಾಖ್ಯೋ ರಾವಣ ಬಂಧುಃ ಅನೀಕೇನ ಸೈನ್ಯೇನ ಸಹಿತ ಸ್ಸನ್, ಪ್ರತಿ ಕರ್ಮಣಃ. ಪ್ರತೀಕಾರಸ್ಯ ಚಕೀರ್ಷಯಾ ಕರ್ತುಮಿಚ್ಛಯಾ ಆಜಗಾಮ ॥ ಗಮಲ್ಯ ಗತೌ – ಸಕ. ಕರ್ತರಿ. ಲಟ್. ಪರ ಪ್ರ. ಏ ॥೨೯॥

**ರಾಮ ವಿಪ್ರಕೃತಃ ಕ್ರವ್ಯಾತ್ಪ್ರತಿ ಕರ್ಮ ಚಕೀರ್ಷಯಾ।**
**ಆಜಗಾಮ ಸಹಾನೀಕಃ ಖರೋ ದೂಷಣ ಸಂಯುತಃ ॥೨೯॥**

ಅರ್ಥ:- ರಾಮ, ವಿಪ್ರಕೃತಃ = ರಾಮ ದೇವರಿಂದ ಅಪಮಾನ ಮಾಡಿಸಿಕೊಳ್ಳಲ್ಪಟ್ಟ ಕ್ರವ್ಯ, ಅತ್ = ಮಾಂಸವನ್ನು, ಭಕ್ಷಿಸುವ ರಾಕ್ಷಸನಾದ. ದೂಷಣ, ಸಂಯುತಃ = ದೂಷಣನಿಂದ ಯುಕ್ತನಾದ ಖರಃ = ಖರನೆಂತೆಂಬುವ ರಾಕ್ಷಸನು ಸಹಾನೀಕಃ (ಸನ್) = ಸೈನ್ಯದಿಂದ ಸಹಿತನಾಗಿ ಪ್ರತಿ ಕರ್ಮ, ಚಿಕೀರ್ಷಯಾ = ಪ್ರತಿ ವ್ಯಾಪಾರಕ್ಕೆ. ಮಾಡಲಿಚ್ಛೆಯಿಂದ. ಆಜಗಾಮ = ಬಂದನು ॥೨೯॥

ತಾನಿತಿ॥ ರಾಜೀವ ಲೋಚನಃ ಕಮಲನಯನಃ ರಮಾನಾಥಃ ಪರಃ ಪೂರ್ಣ ಆನಂದೋಯಸ್ಯಸಃ, ರಾಮಃತಾನ್ ಖರಾದೀನ್ ಚತುರ್ದಶ ಸಹಸ್ರ ಸಂಖ್ಯಾಕಾನ್ ಸುರಾಣಾಂ ಕಾರ್ಯಂ ಭೂಭಾರಹರಣಮೇವಾರ್ಥ ಪ್ರಯೋಜನಂ ತಸ್ಯ ಸಿದ್ಧಯೇ ಲಾಭಾಯ ಲೀಲಯಾ ಅನಾಯಾಸೇ ನೈವಜಘಾನ । ಹನ ಹಿಂಸಾಗತ್ಯೋಃ – ಧಾ. ಸಕ ಕರ್ತರಿ ಲಟ್ ಪರ ಪ್ರ.ಏ । ರಾಜೀವ ಲೋಚನ ಇತಿಲು ಪ್ತೋಪಮಾ ॥೩೦॥

**ತಾನ್ ಜಘಾನ ರಮಾನಾಥೋ ರಾಮೋ ರಾಜೀವ ಲೋಚನಃ ।**
**ಲೀಲ ಯೈವ ಪರಾನಂದ ಸ್ಸುರ ಕಾರ್ಯಾರ್ಥಸಿದ್ಧಯೇ ॥೩೦॥**

ಅರ್ಥ:- ರಾಜೀವ, ಲೋಚನಃ = ಕಮಲ(ದಳ)ದೋಪಾದಿಯಲಿ, ನೇತ್ರಗಳುಳ್ಳ, ರಮಾ, ನಾಥಃ = ಲಕ್ಷ್ಮೀದೇವಿಯರಿಗೆ, ಪತಿಯಾದ. ಪರ ಆನಂದಃ = ಪೂರ್ಣವಾದ ಸುಖವುಳ್ಳ. ರಾಮಃ = ರಾಮದೇವರು. ತಾನ್ = ಖರಾದಿಗಳನ್ನು, ಸುರ, ಕಾರ್ಯ, ಅರ್ಥ, ಸಿದ್ಧಯೇ = ದೇವತೆಗಳ, ಕಾರ್ಯವಾದ ಭೂ ಭಾರಹರಣವೆಂಬ, ಪ್ರಯೋಜನದ, ಲಾಭಕ್ಕೋಸ್ಕರ. ಲೀಲಯೈವ = ಆಟದಿಂದಲೇ ಜಘಾನ = ಸಂಹರಿಸಿದರು. ॥೩೦॥

ಅನೇಕ ರಾಕ್ಷಸ ಸಂಹಾರಃ ಕಥಮೇಕೇನ ರಾಮೇಣ ಕಾರೀತ್ಯಾ ಶಂಕಾಮಾಭೂದಿತ್ಯಾಹ – ರಾಮ ಇತಿ॥ ಪುಸ್ತಾದಗ್ರತಃ, ರಾಮಃ ಪರತಃ ಪೃಷ್ಠಭಾಗೇಪಿ, ರಾಮಃ, ದಿಕ್ಷು ಪ್ರಾಚ್ಯಾದಿಷು ರಾಮಃ ಪರಂ ರಾಮಏವ, ವಿದಿಕ್ಷು, ಆಗ್ನೇಯಾದಿಕೋಣೇಷು ರಾಮಃ ಇತ್ಯೇವಂ ಅನಂತ್ಯೈಃ ಸಂಖ್ಯಾಪರಿಚ್ಛೇದ ಶೂನ್ಯೈಃ, ರಾಮೈಃ ರಾಮರೂಪೈಃ ಅರಾತೀನ್ ಶತ್ರೂನ್ ಖರಾದೀನ್, ನಿಘ್ನನ್ ಸಂಹರನ್, ವಿಶ್ವಂ ಪೂರ್ಣಂ ರೂಪಂ ಯಸ್ಯಸಃ, ರಾಮಃ ವಿರರಾಜ॥ ರಾಜ್ಯದೀಪ್ತೌ – ಧಾ. ಅಕ. ಕರ್ತರಿಲಿಟ್. ಪರ. ಪ್ರ.ಏ॥ ಇಂದ್ರವಜ್ರಾವೃತ್ತಮ್ ॥ಸ್ಯಾದೀಂದ್ರ ವಜ್ರಾ ತತಜಾಸ್ತ ತೋಗಾವಿತಿ ಲಕ್ಷಣಾತ್। ಸರ್ಗಾಂತತ್ವಾದ್ವೃತ್ತ ಭೇದ ಇತಿ ಶುಭಂ ॥೩೧॥

**ರಾಮಃ ಪುರಸ್ತಾತ್ಪರತೋಪಿರಾಮೋ**
**ರಾಮಃಪರಂದಿ ಕ್ಷುವಿದಿಕ್ಷು ರಾಮಃ।**
**ರಾಮೈ ರನಂತ್ಯೈರಿತಿ ವಿಶ್ವರೂಪೋನಿಘ್ನನ್ನ**
**ರಾತೀ ನ್ವಿರರಾಜ ರಾಮಃ ॥೩೧॥**

ಇತೀತಿ ॥ ಶ್ರೀ ಮತಾಂ ಕವೀನಾಂ ಕುಲಸ್ಯ ತಿಲಕಾನಾ ಮಲಂಕಾರಾ ಯಮಾಣಾ ನಾಂ ಶ್ರೀ ಮತಾಂ ತ್ರಿ ವಿಕ್ರಮಪಂಡಿತಾಚಾರ್ಯಾ ಣಾಂ ಸುತೇನ ಶ್ರೀ ನಾರಾಯಣ ಪಂಡಿತಾಚಾರ್ಯೇಣ ವಿರಚಿತಾಯಾಂ ಮಣಿಮಂಜರ್ಯಾಂ ಅವಶ್ಯ ವೇದ ನೀಯಾರ್ಥ ರತ್ನಗ್ರಥಿತ್ವೇನ ತನ್ನಾಮ್ನ್ಯಾಂ ಕೃತೌ

॥ಪ್ರಥಮಃ ಸರ್ಗಃ, ಇತಿ ಸಮಾಪ್ತಃ॥

ಇತಿಶ್ರೀಮತ್ಕವಿಕುಲತಿಲಕ ಶ್ರೀಮತ್ ತ್ರಿವಿಕ್ರಮ ಪಂಡಿತಾಚಾರ್ಯಸುತ ಶ್ರೀಮನ್ನಾರಾಯಣ ಪಂಡಿತಾಚಾರ್ಯವಿರಚಿತಾಯಾಂ ಮಣಿಮಂಜರ್ಯಾಂ

**ಪ್ರಥಮಃ ಸರ್ಗಃ**

******

ಅರ್ಥ:- ಒಬ್ಬರಿಂದ ಅನೇಕ ರಾಕ್ಷಸರ ಸಂಹಾರ ಜರಿಗಿದ ರೀತಿಯನ್ನು ಹೇಳುತ್ತಾರೆ. ಪುರಸ್ತಾತ್ = ಮುಂಭಾಗದಲ್ಲಿ ರಾಮಃ = ರಾಮದೇವರು. ದಿಕ್ಷು = ಪೂರ್ವಾದಿ ದಿಕ್ಕುಗಳಲ್ಲಿ ರಾಮಃಪರಂ = ರಾಮದೇವರೇ. ವಿದಿಕ್ಷು = ಆಗ್ನೇಯಾದಿ ಕೋಣಗಳಲ್ಲಿ ರಾಮಃ = ರಾಮದೇವರು. ಇತಿ = ಈ ರೀತಿಯಾಗಿ. ಅನಂತ್ಯೈಃ = ಅಪರಿಮಿತಗಳಾದ. ರಾಮೈಃ = ರಾಮರೂಪಗಳಂದ ಅರಾತೀನ್= ಶತ್ರುಗಳಾದ ಖರಾದಿಗಳನ್ನು ನಿಘ್ನನ್ = ಸಂಹರಿಸುವ ವಿಶ್ವ ರೂಪಃ = ಪೂರ್ಣವಾದ. ರೂಪವುಳ್ಳ. ರಾಮಃ = ರಾಮದೇವರು ವಿರರಾಜ = ಒಪ್ಪಿದರು.

ಶ್ರೀಮತ್, ಕವಿ, ಕುಲ, ತಿಲಕ, ಶ್ರೀಮತ್, ತ್ರಿವಿಕ್ರಮ, ಪಂಡಿತಾಚಾರ್ಯ, ಸುತ, ಶ್ರೀಮತ್, ನಾರಾಯಣ ಪಂಡಿತಾಚಾರ್ಯ, ವಿರಚಿತಾಯಾಂ = ಸಂಪತ್ತುಳ್ಳ, ಕವಿಗಳ, ವಂಶಕ್ಕೆ, ತಿಲಕ ಸ್ಥಾನೀಯರಾದ, ಸಂಪತ್ತುಳ್ಳ, ತ್ರಿವಿಕ್ರಮ ಪಂಡಿತಾಚಾರ್ಯರ, ಮಕ್ಕಳಾದ, ಸಂಪತ್ತುಳ್ಳ ನಾರಾಯಣ ಪಂಡಿತಾಚಾರ್ಯರಿಂದ, ಕೃತವಾದ, ಮಣಿ, ಮಂಜರ್ಯಾಂ = ತತ್ವಾರ್ಥ ರೂಪ ರತ್ನಗಳಗೆ, ಮಂಜರಿಯಾಗಿರುವ ಗ್ರಂಥದಲ್ಲಿ. ಪ್ರಥಮಃ = ಮೊದಲನೆಯದಾದ ಸರ್ಗಃ = ಸರ್ಗವು ಇತಿ = ಮುಗಿಯಿತು.

ಶ್ರೀ ಮನ್ನೃಸಿಂಹವರ್ಯಾನುಗ್ರಹಜ ಪ್ರಜ್ಞರಾಘವೇಂದ್ರೇಣ।
ಮಣಿ ಮಂಜರೀ ಪ್ರಕಾಶೇ ರಚಿತೇ ಪೂರ್ಣೋಯ ಮಾದಿಮಸ್ಸರ್ಗಃ ॥೧॥

**ಶ್ರೀಮದಾನಂದ ತೀರ್ಥ ಗುರುಭ್ಯೋನಮಃ**

## ದ್ವಿತೀಯ ಸರ್ಗ ಪ್ರಾರಂಭಃ

ಅಸ್ಮಿನ್ ಸರ್ಗೇ ಸಂಕ್ಷೇಪತೋಽವಶಿಷ್ಟರಾಮಕಥಾಂ ಸಾಮಗ್ರ್ಯೇಣ ನಿರೂಪಯತಿ – ತತಇತ್ಯಾದಿ ನಾ॥ ತತಃ ಖರಾದಿವಧ್ಯಾನಂತರಂ, ಲಕ್ಷ್ಮಣೇನ ಸಹಿತೋ, ರಾಮೇ, ದೂರಂ ಸ್ವಾಶ್ರಮಾ ದ್ವಿಪ್ರಕೃಷ್ಟದೇಶಂ, ಗತೇಸತಿ,। ರಾಮೇ ಲಕ್ಷ್ಮಣೇ ದೂರಂ ಗತ ಇತ್ಯರ್ಥಃ । ಅತೋಽರಾಮ ಲಕ್ಷ್ಮಣಯೋರೇಕದಾ ಪ್ರಸ್ಥಾನಾಭಾವೇನ ಏಕಕಾಲೀನ ದೂರ ಗಮನಾಭಾವಾತ್ಕಥಂ ಸಹ ಲಕ್ಷ್ಮಣೇ ರಾಮೇ ದೂರಂಗತ ಇತ್ಯುಕ್ತಿರಿತಿ ಶಂಕಾನವಕಾಶಃ, ಸಹ ಪದಾರ್ಥಸ್ಯ ಸಾಹಿತ್ಯಂಸ್ತ್ಯೇ ಕ ಕ್ರಿಯಾ ನ್ವಯತ್ವಮಾತ್ರ ರೂಪತ್ವಾತ್, "ತೇನ ಸಹೇತಿ ತುಲ್ಯಯೋಗೇ" ಇತಿ ಸಮಾಸ ವಿಧಾಯಕ ಸೂತ್ರೇತುಲ್ಯ ಯೋಗಸ್ಯಾಪ್ಯೇಕ ಕ್ರಿಯಾ ನ್ವಯತ್ವರೂಪಸ್ಯೈವಾಭಿಮತತ್ವ ಸಂಭವಾತ್। ಏಕ ಕಾಲೀನ ಕ್ರಿಯಾನ್ವಯ, ಏವ ತುಲ್ಯ ಯೋಗ ಇತಿ ಪಕ್ಷೇಽಪಿ ಪ್ರಕೃತೇ ನ ದೋಷಃ, ರಾಮಸಂಬಂಧಿನ್ಯಾ ಲಕ್ಷ್ಮಣ ಸಂಬಂಧಿ ನ್ಯಾಶ್ಚ ದೂರ ಗಮನ ಕ್ರಿಯಾಯಾ ಏಕ ಕಾಲೀನ ತ್ವಸ್ಯ ಯುಕ್ತತ್ವಾತ್, ರಾಮ ಕ್ರಿಯಾ ಪ್ರಾಪ್ತ ಸ್ಯ ಲಕ್ಷ್ಮಣ ಕ್ರಿಯಾ ಪ್ರಾಪ್ತಸ್ಯ ಚ ದೇಶಸ್ಯಭಿನ್ನತ್ವೇಽಪಿತಯೋಃಸೀತಾಸ್ತಿತಿ ದೇಶಾಪೇಕ್ಷಯಾ ದೂರತ್ವಾಭಾವಾದಿತಿ ಧ್ಯೇಯಮ್॥ ಕೇಚಿತ್ತು ದೂರಂ ಗತೇ ರಾಮೇ ಸಹ ಲಕ್ಷ್ಮಣೆಸತೀತಿ ಯೋಜಯಂತಿ। ತತ್ತು ರಾಮಲಕ್ಷ್ಮಣಯೋರ್ಮೇಲನ ಕಾಲಃ ರಾವಣ ಕರ್ತೃಕ ಸೀತಾಹರಣ ಕಾಲಶ್ಚೈಕ ಇತ್ಯತ್ರ ಸಾಧಕ ಪ್ರಮಾಣಾಭಾವಾ ಚ್ಚಿಂತ್ಯಮ್॥ "ಯಸ್ಯ ಚ ಭಾವೇನ ಭಾವಲಕ್ಷಣಮ್" ಇತಿ ಸೂತ್ರೇಣ ಅನಿರ್ಜ್ಞಾತ ಕಾಲಕ್ರಿಯಾ ಪರಿಚ್ಛೇದ ಕ ನಿರ್ಜ್ಞಾತ ಕಾಲಕ್ರಿಯಾಶ್ರಯ ಬೋಧಕ ಪದೋತ್ತರಮೇವ ಸಪ್ತಮೀ ವಿಧಾನಾದಿತಿ ದಿಕ್॥ ರಾವಣಃ ಇಯಂ ದೃಶ್ಯಮಾನಾ, ಸೀತಾ, ಮಯಾ, ನೀಯತ, ಇತಿ, ಮತ್ವಾ ಜ್ಞಾತ್ವಾ ಸೀತಾಕಲ್ಪಿತಾ ಮಿಂದ್ರಾಧಿಷ್ಠಿತಯಾ ಭಾಷಣಾ ದಿವ್ಯವಹಾರ ಕರ್ತ್ರೀಂ ಸೀತಾಕೃತಿಂ, ಸೀತಾತ್ವೇನ ಭಾಂತ್ವೇತ್ಯರ್ಥಃ। ತಸ್ಯಾಸೀತಾಯಾ ಆಕೃತಿಂ ಪ್ರತಿಕೃತಿಂ, ನಿನ್ಯೇ। ಲಂಕಾಂಪ್ರತೀತಿ ಶೇಷಃ। ದ್ವಿಕರ್ಮಕತ್ವಾತ್। ನೀಞ್ ಪ್ರಾಪಣೇ-ಧಾ.ದ್ವಿಕ.(ನೀಯತೇ-ಕರ್ಮಣಿ ಲಟ್.ನಿನ್ಯೇ ಕರ್ತರಿ ಲಿಟ್) ಆತ್ಮ.ಪ್ರ.ಏ॥೧॥

**ತತೋ ದೂರಂ ಗತೇರಾಮೇ ರಾವಣಸ್ಸಹಲಕ್ಷ್ಮಣೇ।**
**ಸೀತೇಯಂ ನೀಯತ ಇತಿ ಮತ್ವಾನಿನ್ಯೇತದಾಕೃತಿಮ್॥೧॥**

ಅವಶಿಷ್ಟ ರಾಮಕಥೆಯನ್ನು ಸಂಗ್ರಹದಿಂದ ಈ ಸರ್ಗದಲ್ಲಿ ಪೂರ್ತಿ ಮಾಡುತ್ತಾರೆ.

ಅರ್ಥ:- ತತಃ = ಖರಾದಿವಧಾ ನಂತರದಲ್ಲಿ. ಸಹಲಕ್ಷ್ಮಣೇ = ಲಕ್ಷ್ಮಣನಿಂದ ಸಹಿತರಾದ. ಅವಶಿಷ್ಟ ರಾಮಕಥೆಯನ್ನು ಸಂಗ್ರಹದಿಂದ ಈ ಸರ್ಗದಲ್ಲಿ ಪೂರ್ತಿ ಮಾಡುತ್ತಾರೆ. ರಾಮೇ = ರಾಮದೇವರು. ದೂರಂ = (ತಮ್ಮ ಆಶ್ರಮಕ್ಕೆ) ದೂರ ಪ್ರದೇಶವನ್ನು. ಗತೇ (ಸತಿ)= ಸೇರುತ್ತಿರಲಾಗಿ. (ಹೀಗೆ ಅನ್ವಯಿಸುವುದರಿಂದ ರಾಮದೇವರು ಲಕ್ಷ್ಮಣ ದೇವರು ಕೂಡ ಆಶ್ರಮವನ್ನು ಬಿಟ್ಟು ದೂರದಲ್ಲಿ ಇರುವ ಕಾಲದಲ್ಲಿ ಎಂತಲೇ ತಾತ್ಪರ್ಯ ಲಬ್ಧವಾಗುತ್ತದೆಯೇ ಹೊರತು ಏಕಕಾಲದಲ್ಲಿ ಇಬ್ಬರು ಹೊರಟು ಒಂದೇ ಸ್ಥಳದಲ್ಲಿ ಇರಲಾಗಿ ಎಂತ ಅಲ್ಲ ವೆಂಬುದು ವ್ಯಾಖ್ಯಾನದಲ್ಲಿ ಸ್ಪಷ್ಟವಿದೆ) ರಾವಣಃ = ರಾವಣನು ಇಯಂ = ಈ ಕಾಣಿಸುತ್ತಿರುವ. ಸೀತಾ = ಸೀತಾದೇವಿಯು ಮಯಾ = ನನ್ನಿಂದ ನೀಯತೇ = ತೆಗೆದುಕೊಂಡು ಹೋಗಲ್ಪಡುತ್ತಾಳೆ । ಇತಿ = ಈ ರೀತಿಯಾಗಿ ಮತ್ವಾ = ಭ್ರಮಿಸಿ. ತತ್, ಆಕೃತಿಂ = ಆ ಸೀತಾದೇವಿಯವರ, ಆಕಾರವನ್ನು (ಲಂಕಾಂಪ್ರತಿ = ಲಂಕಾಪುರವನ್ನು ಕುರಿತು) ನಿನ್ಯೇ = ತೆಗೆದುಕೊಂಡು ಹೋದನು. ತಾ- ಸೀತಾಕೃತಿಯನ್ನು ಸೀತಾ ಭ್ರಾಂತಿಯಿಂದ ಅಪಹರಿಸಿದನೆಂತ ಭಾವ ॥೧॥

ನಿಜ ಸೀತಾಕ್ವಾಸೀದಿತ್ಯತ ಆಹ- ರಾಮೇತಿ॥ ರಾಮಸ್ಯ ಅಂತಿಕೇ ಸಮೀಪೇ, ಸ್ಥಿತಾ, ಮಂದ್ಯೈಃ ಅಜ್ಞೈಃ, ನಸಮದೃಶ್ಯತ ದೃಶ್ಯಮಾನಾನಾಭೂತ್॥ ದೃಶಿರ್‌ಪ್ರೇಕ್ಷಣೇ- ಧಾ.ಕರ್ಮಣಿ ಲಙ್.ಆತ್ಮಪ್ರ.ಏ॥ ನಿತ್ಯಂ ಅವಿಯೋಗೋ ರಾಮವಿರಹಾಭಾವೋಽಸ್ಯಾ ಅಸ್ತೀತಿ ತಥೋಕ್ತಾ ಸೀತಾ, ರೂಪಾಂತರೇಣ, ಕೈಲಾಸಂ ತನ್ನಾಮಕಂ ಶಿವಾವಾಸ ಸ್ಥಾನಂ, ಗತಾಪ್ರಾಪ್ತಾ। ಏಕೇನ ರೂಪೇಣಾ ದೃಶ್ಯಾರಾಮನಿಕಟೇ ಅಭೂತ್. ರೂಪಾಂತರೇಣ ಕೈಲಾಸಮಗಾದಿತಿ ಭಾವಃ॥೨॥

**ರಾಮಾಂತಿಕೇ ಸ್ಥಿತಾ ದೇವೀನ ಮಂದ್ಯೈಸ್ಸಮದೃಶ್ಯತ।**
**ರೂಪಾಂತ ರೇಣ ಕೈಲಾಸಂಗತಾ ನಿತ್ಯಾವಿಯೋಗಿನೀ॥೨॥**

ಅರ್ಥ:- ಸೀತಾದೇವಿಯಿದ್ದ ಸ್ಥಳವನ್ನು ಹೇಳುತ್ತಾರೆ - ರಾಮ. ಅಂತಿಕೇ = ರಾಮದೇವರ, ಸಮೀಪದಲ್ಲಿ. ಸ್ಥಿತಾ - ಇದ್ದಂಥಾ. ದೇವೀ = ಸೀತಾದೇವಿಯರು ಮಂದ್ಯೈಃ = ಅಜ್ಞರಿಂದ. ನಸಮ ದೃಶ್ಯತ = ಕಾಣಿಸಿಕೊಳ್ಳಲ್ಪಡಲಿಲ್ಲ । ನಿತ್ಯ.

ಅವಿಯೋಗಿನಿ = ನಿರಂತರದಲ್ಲಿಯು, ಪತಿ ವಿಯೋಗ ರಹಿತರಾದ. ದೇವಿಯವರು. ರೂಪಾಂತರೇಣ = ಮತ್ತೊಂದು ರೂಪದಿಂದ. ಕೈಲಾಸಂ = ಕೈಲಾಸ ಲೋಕವನ್ನು. ಗತಾ = ಸೇರಿದರು ॥೨॥

ನಿತ್ಯಮಿತಿ॥ ನಿಜಾಂ, ದೇವೀಂಸೀತಾಂ, ನಿತ್ಯಂ, ಪಶ್ಯನ್, ಪೂರ್ಣೇನ ನಿತ್ಯಾಭಿವ್ಯಕ್ತೇನ ಸಂತೋಷೇಣ ಸಂಭೃತಃ ಪೂರ್ಣಃ, ರಾಮಃ, ದೇವೀಸೀತಾ, ನ ದೃಶ್ಯತೇ; ಇತಿ ಅತೋ ಹೇತೋಃ ಸಂಕಟವಾನ್ ದುಃಖವಾನಿವ, ಅಭೂತ್। ಅಸುರ ಜನ ವ್ಯಾಮೋಹಾದ್ಯರ್ಥಂ ದುಃಖಂ ಪ್ರಾದರ್ಶಯದಿತಿ ಧ್ಯೇಯಮ್॥೩॥

**ನಿತ್ಯಂ ಪಶ್ಯನ್ನಿಜಾಂ ದೇವೀಂ ಪೂರ್ಣ ಸಂತೋಷ ಸಂಭೃತಃ।**
**ರಾಮೋ ನ ದೃಶ್ಯತೇ ದೇವೀ ತ್ಯಭೂತ್ಸಂಕಟವಾನಿವ॥೩॥**

ಅರ್ಥ:- ನಿಜಾಂ = ಸ್ವಕೀಯರಾದ. ದೇವೀಂ = ಸೀತಾದೇವಿಯರನ್ನು ನಿತ್ಯಂ = ಸರ್ವಕಾಲದಲ್ಲಿ. ಪಶ್ಯನ್ = ನೋಡುತ್ತಿರುವಂಥಾ. ಪೂರ್ಣ, ಸಂತೋಷ, ಸಂಭೃತಃ = ಅಪರಿಚ್ಛಿನ್ನವಾದ, ಸಂತೋಷದಿಂದ, ತುಂಬಿರುವ. ರಾಮಃ = ರಾಮದೇವರು ದೇವೀ = ಸೀತಾದೇವಿಯು. ನದೃಶ್ಯತೇ = ಕಾಣಲ್ಪಡುವುದಿಲ್ಲ । ಇತಿ = ಈ ಕಾರಣದಿಂದ ಸಂಕಟವಾನಿವ = ದುಃಖವುಳ್ಳವನೋಪಾದಿಯಲಿ. ಅಭೂತ್ = ಇದ್ದರು ॥೩॥

ಪ್ರಭುಂಜನ ಇತಿ॥ ಪ್ರಭುಂಜನಸ್ಯ ವಾಯೋಃ ಸುತಃ ಶ್ರೀಮಾನ್ ನಿರಂಜನಃ ನಿರ್ದೋಷಃ ಅಂಜನಾಯ ಅಪತ್ಯಮ್ ಪುಮಾನ್ ಆಂಜನೇಯೋ ಹನುಮಾನ್, ಭಕ್ತ್ಯಾ ಸಂಪೂರ್ಣಸ್ಸನ್, ರಾಜೀವಲೋಚನಂ ಕಮಲನಯನಂ, ರಾಮಂ, ನನಾಮ ವವಂದೇ। ಣಮು ಪ್ರಹತ್ವೇ ಶಬ್ದೇಚ -ಧಾ.ಸಕ.ಕರ್ತರಿ.ಲಿಟ್.ಪರಾ.ಪ್ರ.ಏ॥೪॥

**ಪ್ರಭಂಜನ ಸುತ ಶ್ರಿಮಾನಾಂಜನೇಯೋ ನಿರಂಜನಃ।**
**ನನಾಮ ಭಕ್ತಿ ಸಂಪೂರ್ಣೋ ರಾಮಂ ರಾಜೀವಲೋಚನಮ್॥೪॥**

ಅರ್ಥ:- ಪ್ರಭಂಜನ, ಸುತಃ = ವಾಯುದೇವರ, ಮಕ್ಕಳಾದ. ಶ್ರೀಮಾನ್ = ಕ್ರಾಂತಿಮಂತರಾದ. ನಿರಂಜನಃ = ದೋಷರಹಿತರಾದ. ಆಂಜನೇಯಃ = ಅಂಜನಾ ಪುತ್ರರಾದ ಹನುಮಂತ ದೇವರು. ಭಕ್ತಿ, ಸಂಪೂರ್ಣಃ (ಸನ್) = ವಿಶ್ವಾಸದಿಂದ

ಪೂರ್ಣರಾಗಿ ರಾಜೀವ, ಲೋಚನಂ = ಕಮಲ (ದಳ) ದೋಪಾದಿಯಲಿ, ನೇತ್ರಗಳುಳ್ಳ, ರಾಮಂ = ರಾಮದೇವರನ್ನು. ನನಾಮ = ವಂದಿಸಿದರು ॥೪॥

ರಾಮೇತಿ॥ ಸಾ ಹನುಮಾನ್, ನಿರ್ದುಃಖ ದುಃಖರಹಿತ, ಆನಂದೇನ ಸುಖೇನ ಲೀಲಾ ಸೃಷ್ಟ್ಯಾದೌ ಪ್ರವೃತ್ತಿ ರಾತ್ಮ ಸ್ವಭಾವೋ ಯಸ್ಯ ತತ್ಸಂಬುದ್ಧಿಃ। ಶ್ರು-ದೇವಸ್ಯೈಷ ಸ್ವಭಾವೋ ಯಮಿತಿ ಶ್ರುತೇಃ। ಯದ್ವಾ ಏಕಪದಮೇತತತ್। ತತ್ ತದಾನಿರ್ದುಃಖೋ ದುಃಖಾಸಂಭಿನ್ನ ಆನಂದಸ್ಸುಖಂ ಯಸ್ಯೇತಿ ಬಹುವ್ರೀಹಿಃ। ಸ್ವಾಮಿನ್ ಪ್ರಭೋ, ಹೇರಾಮ ತುಭ್ಯಂ, ನಮಃ॥ ತ್ವಂ ದುಷ್ಟಾನ್ ರಾವಣಾದೀನ್, ಜಹೀಸಂಹರ। ಹನ ಹಿಂಸಾಗತ್ಯೋಃ-ಧ.ಸಕ.ಕರ್ತರೀ.ಲೋಟ್.ಪರ.ಮ.ಏ। ಇತಿ ನಿಜಂ,ಗುರುಂ ಪಿತರಮುಪದೇಶಕಂ ಚ ರಾಮಂ, ಅಸ್ತೌತ್ ತುಷ್ಟಾವ। ಷ್ಟುಞ್ ಸ್ತುತೌ-ದಾ.ಸಕ.ಕರ್ತರಿ.ಲಙ್.ಪರ.ಪ್ರ.ಏ॥೫॥

**ರಾಮಸ್ವಾಮಿ ನ್ನಮಸ್ತುಭ್ಯಂ ದುಷ್ಟಾನ್ ಜಹಿನಿಜಾನವ।**
**ನಿರ್ದುಃ ಖಾ ನಂದಲೀಲಾ ತ್ಮನ್ನಿತ್ಯಸ್ತೌತ್ಸನಿಜಂ ಗುರುಮ್॥೫॥**

ಅರ್ಥ:- ನಿರ್ದುಃಖ = ದುಃಖರಹಿತನಾದ. ಆನಂದ, ಲೀಲಾ, ಆತ್ಮನ್ = ಸುಖದಿಂದ ಆಟವೇ ಸ್ವಭಾವವಾಗಿವುಳ್ಳಂಥಾ, ಸ್ವಾಮಿನ್ = ಪ್ರಭುವಾದ. ಹೇರಾಮ = ಎಲೈ ರಾಮದೇವರೇ ತುಭ್ಯಂ = ನಿನಗೋಸ್ಕರ. ನಮಃ = ನಮಸ್ಕಾರವು. ತ್ವಂ = ನೀವು ದುಷ್ಟಾನ್ = ದುಷ್ಟರನ್ನು. ಜಹಿ = ಸಂಹರಿಸಿರಿ. ನಿಜಾನ್ = ಸ್ವಜನರನ್ನು. ಅವ = ರಕ್ಷಿಸಿರಿ. ಇತಿ = ಈ ರೀತಿಯಾಗಿ. ನಿಜಂ = ಸ್ವಕೀಯರಾದ = ಗುರುಂ = ತಂದೆಯು ಮತ್ತು ಉಪದೇಶಕರು ಆದ ರಾಮದೇವರನ್ನು. ಅಸ್ತೌತ್ = ಸ್ತುತಿಸಿದರು ॥೫॥

ಸ ಇತಿ॥ ಸರಾಮಃ, ವನಾಂತರ ಮನ್ಯದ್ವನಂ, ಆಸಾದ್ಯ ಪ್ರಾಪ್ಯ ಸುಗ್ರೀವಂ ತನ್ನಾಮಾನಂ ಕಪಿರಾಜಂ, ಐಕ್ಷ್ಯತ ಅಪಶ್ಯತ್। ಈಕ್ಷದರ್ಶನೇ-ಧಾ.ಸಕ.ಕರ್ತರಿ ಲಙ್.ಆತ್ಮಪ್ರ.ಏ। ತೇನ ಸುಗ್ರೀವೇಣ, ಸಖ್ಯಂ ಸ್ನೇಹಂ ಸಮಾಸಾದ್ಯ, ತಸ್ಯ ಸುಗ್ರೀವ ಸ್ಯಾಗ್ರಜಂವಾಲಿನಂ, ನಿಜಘಾನ॥೬॥

**ಸವನಾಂತರ ಮಾಸಾದ್ಯರಾಮಸ್ಸುಗ್ರೀವ ಮೈಕ್ಷತ।**
**ತೇನ ಸಖ್ಯಂ ಸಮಾಸಾದ್ಯ ನಿಜಘಾನ ತದಗ್ರಜಮ್॥೬॥**

ಅರ್ಥ:- ಸಃ = ಆರಾಮದೇವರು. ವನಾಂತರಂ = ಮತ್ತೊಂದು ವನವನ್ನು ಆಸಾಧ್ಯ = ಹೊಂದಿ. ಸುಗ್ರೀವನನ್ನು ಐಕ್ಷತ = ಕಂಡರು. ತೇನ = ಆಸುಗ್ರೀವನಿಂದ. ಸಖ್ಯಂ = ಸ್ನೇಹವನ್ನು. ಸಮಾ ಸಾಧ್ಯ = ಹೊಂದಿ. ತತ್, ಅಗ್ರಜಂ = ಆ ಸುಗ್ರೀವನ, ಅಣ್ಣನಾದ ವಾಲಿಯನ್ನು ನಿಜಘಾನ = ಸಂಹರಿಸಿದರು ॥೬॥

ತತ ಇತಿ॥ ತತಃ ರಾಜ್ಯಲಾಭಾ ನಂತರಂ, ಸುಗ್ರೀವೇಣ ಸಂದಿಷ್ಟಾಃ ಆಜ್ಞಪ್ತಾಃ, ನಿಪುಣಾಃ ಕುಶಲಾಃ, ವೀರಾಃ ಆರಬ್ಧಾಂತ ಗಾಮಿನಃ, ವಾನರಾಃ ಕಪಯಃ, ಸೀತಾಯಾಃ ಮಾರ್ಗಣೇ ಅನ್ವೇಷಣೇ ತತ್ಪರಾ ಆಸಕ್ತಾಸಂತಃ ಸರ್ವಶ ಸಮಸ್ತಾಸು, ದಿಕ್ಷು, ಪ್ರಸಸ್ರುಃ ಸಂಚೇರುಃ। ಸೃಗತೌ–ಧಾ.ಸಕ.ಕರ್ತರಿ ಲಿಟ್.ಪರ.ಪ್ರ.ಏ। ಅತ್ರ ವಾನರ ಪದಾರ್ಥಸ್ಯ ಕ್ರಿಯಾನ್ವಯೋತ್ತರಂ ನಿಪುಣಾದಿ ವಿಶೇಣಾಂ ಸತ್ವೇಪಿ ತೇಷಾ ಮುತ್ಥಿತಾಕಾಂಕ್ಷ ತ್ವಾನ್ನ ಸಮಾಪ್ತ ಪುನರಾದಾನದೋಷಃ ಉತ್ಥಾಪ್ಯಾಕಾಂಕ್ಷಯಾ ವಿಶೇಷಣಾನ್ವಯ ಏವ ತಸ್ಯ ದೋಷಾತ್ವಾಂಗೀಕಾರಾತ್॥೭॥

**ತತಸ್ಸುಗ್ರೀವ ಸಂದಿಷ್ಟಾವಾನರಾ ದಿಕ್ಷು ಸರ್ವಶಃ।**
**ಪ್ರ ಸ ಸ್ರುರ್ನಿಮಣಾ ವೀರಾ ಸೀತಾ ಮಾರ್ಗಣತತ್ಪರಾಃ॥೭॥**

ಅರ್ಥ:- ತತಃ = ರಾಜ್ಯಪ್ರಾಪ್ತ್ಯ ನಂತರದಲ್ಲಿ. ಸುಗ್ರೀವ, ಸಂದಿಷ್ಟಾಃ = ಸುಗ್ರೀವನಿಂದ, ಆಜ್ಞಪ್ತರಾದ. ನಿಪುಣಾಃ = ಕುಶಲರಾದ ವೀರಾಃ = ಪರಾಕ್ರಮವಂತರಾದ ವಾನರಾಃ = ಕಪಿಗಳು. ಸೀತಾ, ಮಾರ್ಗಣ, ತತ್ಪರಾಃ (ಸಂತಃ) = ಸೀತಾದೇವಿಯವರ, ಹುಡುಕೋಣದರಲ್ಲಿ, ಆಸಕ್ತರಾಗಿ, ಸರ್ವಶಃ = ಸಮಸ್ತಗಳಾದ ದಿಕ್ಷು = ದಿಕ್ಕುಗಳಲ್ಲಿ ಪ್ರಸಸ್ರುಃ = ಸಂಚರಿಸಿದರು ॥೭॥

ದಕ್ಷಿಣಾಮಿತಿ॥ಹನುಮಾನ್, ದಕ್ಷಿಣಾಂ, ಕಕುಭಂ ದಿಶಂ, ಗತ್ವಾ ಪ್ರಾಪ್ಯ, ಅಂಭಸಾಂ ನಿಧಿಂ ಸಮುದ್ರಂ, ಅಲುಕ್ ಸಮಾಸಃ। ಅತಿಲಂಘ್ಯ, ಲಂಕಾಂಗತಃಸ್ಸನ್, ಸೀತಾಕೃತಿಂ, ಅವೈಕ್ಷತ ಅಸಶ್ಯತ್। ತತೋ ಲಂಕಾಮಿತಿ ಪಾಠೇ ಗತ ಇತಿಶೆಷಃ॥೮॥

**ದಕ್ಷಿಣಾಂ ಕ ಕುಭಂಗತ್ವಾ ಹನುಮಾನಂ ಭಸಾಂ ನಿಧಿಮ್।**
**ಅತಿಲಂಘ್ಯಗತೋ ಲಂಕಾಂ ಸೀತಾಕೃತಿ ಮವ್ಯೈಕ್ಷತ॥೮॥**

ಅರ್ಥ:- ಹನುಮಾನ್ = ಹನುಮಂತ ದೇವರು. ದಕ್ಷಿಣಾಂ = ದಕ್ಷಿಣವಾದ ಕಕುಭಂ = ದಿಕ್ಕನ್ನು ಕುರಿತು. ಗತ್ವಾ = ಹೋಗಿ. ಅಂಭಸಾಂ, ನಿಧಿಂ = ನೀರುಗಳಿಗೆ, ಆಧಾರವಾದ ಸಮುದ್ರವನ್ನು ಅತಿಲಂಘ್ಯ = ದಾಟಿ ಲಂಕಾಂ = ಲಂಕೆಯನ್ನು ಗತಃ (ಸನ್) = ಸೇರಿದವರಾಗಿ. ಸೀತಾ, ಆಕೃತಿಂ = ಸೀತಾದೇವಿಯವರ ಆಕಾರವನ್ನು ಅವ್ಯೈಕ್ಷತ = ಕಂಡರು ॥೮॥

ರಾಮೇತಿ॥ ಅಸೌ ಹನುಮಾನ್, ರಾಮಸ್ಯ ಅಂಗುಳೀಯಕ ಮೂರ್ಮಿಕಾಂದೇವ್ಯೈ ಸೀತಾಕೃತ್ಯೈ, ದತ್ವಾ, ತತಸ್ಸೀತಾಕೃತೇಃ, ಚೂಡಾಮಣಿಂ ಶಿರೋರತ್ನಂ, ಸಂಗೃಹ್ಯ ಉಪಾದಾಯ, ಜಾನಕೀಂ ಸೀತಾಪ್ರತಿ ಕೃತಿಂ, ಭಕ್ತ್ಯಾನತ್ವಾ, ತರುಂವೃಕ್ಷಂ ಆರುಹತ್। ರುಹಬೀಜ ಜನ್ಮನೀತಿ ಪಠಿತಾದನ್ಯಃ-ಧಾ.ಸಕ.ಕರ್ತರಿ ಲಙ್.ಪರ.ಪ್ರ.ಏ॥೯॥

**ರಾಮಾಂಗುಳೀಯಕಮ ಧೇವ್ಯೈ ದತ್ವಾಚೂಡಾಮಣಿಂ ತತಃ।**
**ಸಂಗೃಹ್ಯ ಜಾನಕೀಂ ಭಕ್ತ್ಯಾನತ್ವಾ ಸಾವಾರುಹತ್ತರುಮ್॥೯॥**

ಅರ್ಥ:- ಅಸೌ = ಈ ಹನುಮಂತ ದೇವರು. ರಾಮ, ಅಂಗುಳೀಯಕಂ = ರಾಮ ದೇವರ, ಉಂಗುರವನ್ನು. ದೇವ್ಯೈ = ಸೀತಾಕೃತಿ ಗೋಸ್ಕರ ದತ್ವಾ = ಕೊಟ್ಟು. ತತಃ = ಸೀತಾಕೃತಿಯ ದೆಸೆಯಿಂದ ಚೂಡಾಮಣಿಂ = ಶಿರೋರತ್ನವನ್ನು ಸಂಗೃಹ್ಯ = ಸ್ವೀಕರಿಸಿ. ಜಾನಕೀಂ = ಸೀತಾದೇವಿಯವರನ್ನು ಭಕ್ತ್ಯಾ = ವಿಶ್ವಾಸದಿಂದ. ನತ್ವಾ = ವಂದಿಸಿ ತರುಂ = ವೃಕ್ಷವನ್ನು ಆರುರೋಹ = ಏರಿದರು. ॥೯॥

ವನಮಿತಿ॥ ಮಾರುತಸ್ಯ ವಾಯೋರಪತ್ಯಂ ಪೂಮಾನ್ಮಾರುತಿರ್ಹನುಮಾನ್ ಉಚ್ಚೈರಧಿಕಂ, ವನಂ. ವಿಶಕಲ್ಯ ಉತ್ಪಾಟ್ಯ, ಅಕ್ಷ ಪೂರ್ವಕಾನ್, ರಾಕ್ಷಸಾನ್, ನಿಹತ್ಯ, ಪುಚ್ಛಗತೇನ ವಹ್ನಿನಾ ಅಗ್ನಿನಾ ಲಂಕಾಂ, ಅದಹತ್ ಭಸ್ಮೀಚಕಾರ। ದಹಭಸ್ಮೀಕರಣೀ-ಧಾ.ಸಕ.ಕರ್ತರಿ ಲಙ್.ಪರ.ಪ್ರ.ಏ॥೧೦॥

**ವನಂ ವಿಶಕಲ್ಯೋಚ್ಚೈ ರಾಕ್ಷಸಾನಕ್ಷ ಪೂರ್ವಕಾನ್।**
**ನಿಹತ್ಯಮಾರುತಿರ್ಲಂಕಾ ಮದಹತ್ಪುಚ್ಛವಹ್ನಿನಾ॥೧೦॥**

ಅರ್ಥ:- ಮಾರುತಿಃ = ವಾಯುದೇವರ ಪುತ್ರರಾದ ಹನುಮಂತ ದೇವರು ಉಚ್ಚೈಃ = ಅಧಿಕವಾಗಿ. ವನಃ = ಶಿಂಶುಪಾವನವನ್ನು. ವಿಶಕಲ್ಯ= ನಾಶನ ಮಾಡಿ ಅಕ್ಷ ಪೂರ್ವ ಕಾನ್ = ಅಲ್ಷಕುಮಾರನೇ, ಮೊದಲಾಗಿವುಳ್ಳ, ರಾಕ್ಷಸಾನ್ = ರಾಕ್ಷಸರನ್ನು ನಿಹತ್ಯ = ಸಂಹರಿಸಿ. ಪುಚ್ಛ, ವಹ್ನಿನಾ = ಬಾಲದಲ್ಲಿದ್ದ ಬೆಂಕಿಯಿಂದ ಲಂಕಾಂ = ಲಂಕೆಯನ್ನು ಅದ ಹತ್ = ಭಸ್ಮೀಕರಿಸಿದರು ॥೧೦॥

ತತ ಇತಿ॥ ತತಃ ಲಂಕಾದಹನಾನಂತರಂ, ಸ ಹನುಮಾನ್, ರತ್ನಾಕರಂ ಸಮುದ್ರಂ, ತೀರ್ತ್ವಾ ಉಲ್ಲಂಘ್ಯ, ವಾನರೇಂದ್ರೇರ್ಜಾಂಬವದಾದಿಭಿಃ ಸಭಾಜಿತಃ ಪೂಜಿತಸ್ಸನ್, ರಾಮಾಯ, ರಾಮಂ ಸಂತೋಷಯಿತುಂ। ಸೂ-ಕ್ರಿಯಾರ್ಥೋಽಪಪದನ್ಯೇತಿ ಚತಿರ್ಥೀ। ಪ್ರಾಪ್ಯಗತ್ವಾ, ಚೂಡಾಮಣಿಂ ಸೀತಾದತ್ತಾಂ, ದತ್ವಾ, ಧನ್ಯಃ ಕೃತಾರ್ಥಸ್ಸನ್, ಅನಮತ್ ಅವಂದತ॥೧೧॥

**ತತೋ ರತ್ನಾಕರಂ ತೀರ್ತ್ವಾವಾನರೇಂದ್ರೈಸ್ಸಭಾಜಿತಃ।**
**ದತ್ವಾ ಚೂಡಾಮಣಿಂ ಧನ್ಯಃ ಪ್ರಾಪರಾಮಾಯಸೋಽನಮತ್॥೧೧॥**

ಅರ್ಥ:- ತತಃ = ಲಂಕಾದಹನಾ ನಂತರದಲ್ಲಿ. ಸಃ = ಆ ಹನುಮಂತ ದೇವರು ರತ್ನಾಕರಂ = ಸಮುದ್ರವನ್ನು ತೀರ್ತ್ವಾ = ದಾಟಿ. ವಾನರೇಂದ್ರೈಃ = ಕಪಿ ಶ್ರೇಷ್ಠರಾದ ಜಾಂಬವಾದಿಗಳಿಂದ ಸಭಾಜಿತಃ (ಸನ್) = ಮಾನಿತರಾಗಿ. ರಾಮಾಯ = ರಾಮ ದೇವರನ್ನು ಸಂತೋಷಪಡಿಸುವುದಕ್ಕಾಗಿ. ಪ್ರಾಪ್ಯ = ನಡೆದು ಚೂಡಾಮಣಿಂ = ಶಿರೋರತ್ನವನ್ನು ದತ್ವಾ = ಕೊಟ್ಟು ಧನ್ಯಃ (ಸನ್) ಕೃತಕೃತ್ಯರಾಗಿ ಅನಮತ್ = ವಂದಿಸಿದರು. ॥೧೧॥

ರಾಮ ಇತಿ॥ ರಾಮಃ, ಹನುಮತಾ, ಧೀರ್ಜ್ಞಾನಮಸ್ಯಾಸ್ತೀತಿ ಧೀಮತಾ, ಲಕ್ಷ್ಮಣೇನ, ಸಸೈನ್ಯೇನ ಸೈನ್ಯೇನ ಸಹಿತೇನ, ಸುಗ್ರೀವೇಣ ಸಾರ್ಧಂ ಸಹ, ಕೀನಾಶಸ್ಯ ಯಮಸ್ಯ ಹರಿತಂ ದಿಶಂ ದಕ್ಷಿಣಾಂ ಯಯೌ। ನಿ॥ ಕೃತಾಂತೇ ಪುಂ ಸಿಕೀನಾಶ ಇತ್ಯಮರಃ॥೧೨॥

**ರಾಮೋಽಹನುಮತಾ ಸಾರ್ಧಂ ಲಕ್ಷ್ಮಣೇನ ಚ ಧೀಮತಾ।**
**ಸುಗ್ರೀವೇಣ ಸಸೈನ್ಯೇನ ಕೀನಾಶ ಹರಿತಂ ಯಯೌ॥೧೨॥**

ಅರ್ಥ: ರಾಮಃ = ರಾಮದೇವರು. ಹನುಮತಾ = ಹನುಮಂತ ದೇವರಿಂದ ಧೀಮತಾ = ಬುದ್ಧಿವಂತರಾದ ಲಕ್ಷ್ಮಣೇನ = ಲಕ್ಷ್ಮಣ ದೇವರಿಂದ ಸಸೈನ್ಯೇನ = ಸೈನ್ಯದಿಂದ ಸಹಿತನಾದ ಸುಗ್ರೀವೇಣ ಚ = ಸುಗ್ರೀವನಿಂದ ಕೂಡ ಸಾರ್ಧಂ = ಕೂಡಿ. ಕೀನಾಶ, ಹರಿತಂ = ಯಮದೇವರ, ದಿಕ್ಕನ್ನು (ದಕ್ಷಿಣ ದಿಕ್ಕನ್ನು) ಕುರಿತು ಯಯೌ = ಹೊರಟರು ॥೧೨॥

ಸ ಇತಿ॥ ಸ ರಾಮಃ, ದಕ್ಷಿಣ ಅಂಭೋದೌ ಸಮುದ್ರೇ, ಮರ್ಕಟೈಃ ಕಪಿಬಿರ್ನಲಾದಿಭಿಃ, ಸೇತುಂ, ಬಂಧಯಾಮಾಸ। ಬಂಧಬಂಧನೇ-ಧಾ.ಸಕ.ಕರ್ತರಿ ಲಟ್.ಪರ.ಪ್ರ.ಏ। ತೇನ ಸೇತುರೂಪೇಣ ವರ್ತ್ಮನಾ ಮಾರ್ಗೇಣ, ಸಸೈನ್ಯಸ್ಸನ್, ನಕ್ತಂ ರಾತ್ರತ್ರೌಚರಂತೀತಿ ನಕ್ತಂ ಚರಾಣಾಂ ರಾಕ್ಷಸಾನಾಂ ಪುರಂ ಲಂಕಾಂ, ಯಯೌ॥೧೩॥

**ಸ ಸೇತುಂ ದಕ್ಷಿಣಾನಾಂಭೋದೌ ಬಂಧಯಾಮಾಸ ಮರ್ಕಟೈಃ।**
**ಸಸೈನ್ಯೋ ವರ್ತ್ಮನಾತೇನ ನಕ್ತಂಚರ ಪುರಂ ಯಯೌ॥೧೩॥**

ಅರ್ಥ:- ಸಃ = ರಾಮದೇವರು. ದಕ್ಷಿಣಾಂಬೋಧೌ= ದಕ್ಷಿಣ ಸಮುದ್ರದಲ್ಲಿ ಮರ್ಕಟೈಃ = ನಲಾ ದಿಕಪಿಗಳಿಂದ ಸೇತುಂ = ಸೇತುವನ್ನು ಬಂಧಯಾಮಾಸ = ಕಟ್ಟಿಸಿದರು. ತೇನ = ಅಂಥಾ ವರ್ತ್ಮನಾ = ಸೇತು ಮಾರ್ಗದಿಂದ ಸಸೈನ್ಯಃ (ಸನ್) = ಸೈನ್ಯದಿಂದ ಸಹಿತರಾಗಿ, ನಕ್ತಂ, ಚರಂ, ಪುರಃ = ರಾತ್ರಿಯಲ್ಲಿ, ಸಂಚರಿಸುವ, ರಾಕ್ಷಸರ ಪುರವಾದ ಲಂಕೆಯನ್ನು ಯಯೌ = ಸೇರಿದರು ॥೧೩॥

ನಿಜಘ್ನುರಿತಿ॥ ಸಹಲಕ್ಷ್ಮಣಾಃ, ವಾನರಾಃ, ರಾಕ್ಷಸಸ್ಯರಾವಣಸ್ಯಾನೀಕಂ ಸೈನ್ಯಂ, ನಿಜಘ್ನುಃ। ಹನುಮಾನ್, ಭಗವತೋ ರಾಮಸ್ಯಪ್ರೀತ್ಯೈ. ಅತಿಬಲಾನ್, ರಿಪೂನ್ ನಿಕುಂಭಾದೀನ್, ಜಘಾನ॥೧೪॥

**ನಿಜಘ್ನೂರಾಕ್ಷಸಾನೀಕಂ ವಾನರಾ ಸ್ಸಹಲಕ್ಷ್ಮಣಾಃ।**
**ಹನುಮಾನ್ ಭಗವತ್ಪ್ರೀತ್ಯೈ ಜಘಾನಾತಿ ಬಲಾನ್‌ರಿಪೂನ್॥೧೪॥**

ಅರ್ಥ:- ಸಹಲಕ್ಷ್ಮಣಾಃ = ಲಕ್ಷ್ಮಣ ಸಹಿತರಾದ. ವಾನರಾಃ = ಕಪಿಗಳು ರಾಕ್ಷಸ, ಅನೀಕಂ = ರಾಕ್ಷಸನಾದ ರಾವಣನ, ಸೈನ್ಯವನ್ನು ನಿಜಘ್ನುಃ = ಸಂಹರಿಸಿದರು. ಹನುಮಾನ್ = ಹನುಮಂತ ದೇವರು. ಭಗವತ್, ಪ್ರೀತ್ಯೈ = ಷಡ್ಗುಣ ಸಂಪನ್ನರಾದ

ರಾಮದೇವರ, ಪ್ರೀತಿಗೋಸ್ಕರ, ಅತಿ, ಬಲಾನ್ = ಅಧಿಕವಾಗಿ ಶಕ್ತಿವುಳ್ಳ, ರಿಪೂನ್ = ಶತ್ರುಗಳಾದ ನಿಕುಂಭಾದಿಗಳನ್ನು ಜಘಾನ = ಸಂಹರಿಸಿದರು ॥೧೪॥

ಸ ಇತಿ॥ ಸ ಹನುಮಾನ್, ಮಹಾರಾಕ್ಷಸಾ ಇಂದ್ರಜಿತಾ ಮೋಹಿತಾನ್ ನಾಗಪಾಶಾದಿನಾ ಮೂರ್ಛಾಂ ಪ್ರಾಪಿತಾನ್, ಸರ್ವವಾನರಾನ್ ಸುಗ್ರೀವಾದೀನ್ ಗಂಧಮಾನಂ ಪರ್ವತಂ, ಆನೀಯ, ತಸ್ಮಿನ್ ಗಿರೌಗತಾನಾಂ ಓಷಧಾನಾಂ ಮೃತ ಸಂಜೀವನ್ಯಾದಿರೂಪಾಣಾಂ ವಾಯುನಾ, ಅಜೀವಯತ್ ಉತ್ಥಾಪಯಾಮಾಸ। ಜೀವಪ್ರಾಣಧಾರಣೇ- ಧಾ.ಣಿಜಂತಾತ್.ಸ.ಕರ್ಮಕಾತ್ ಕರ್ತರಿ ಲಙ್.ಪರ.ಪ್ರ.ಏ। ತದ್ಗತೌಷಧಿವಾಯುನೇತಿ ಪಾಠೇತು ತದ್ಗತ ಮೃತಸಂಜೀವನ್ಯಾದೌಷಧೀನಾಂ ವಾಯುನೇತ್ಯರ್ಥಃ॥೧೫॥

**ಸೋಽಜೀವಯನ್ಮಹಾರಕ್ಷೋ ಮೋಹಿತಾಂತ್ಸರ್ವವಾನರಾನ್।**
**ಗಂಧಮಾದನ ಮಾನೀಯತದ್ಗತೌವಷಧವಾಯುನಾ॥೧೫॥**

ಅರ್ಥ:- ಸಃ = ಆ ಹನುಮಂತ ದೇವರು. ಮಹಾರಕ್ಷಃ, ಮೋಹಿತಾನ್ = ದೊಡ್ಡ ರಾಕ್ಷಸನಾದ ಇಂದ್ರಜಿತ್ತಿನಿಂದ, ಮೂರ್ಛೆ ಹೊಂದಿಸಲ್ಪಟ್ಟಂಥಾ. ಸರ್ವ, ವಾನರಾನ್ = ಸಮಸ್ತರಾದ, ಕಪಿಗಳನ್ನು ಗಂಧಮಾದನಂ = ಗಂಧಮಾದನ ಪರ್ವತವನ್ನು ಆನೀಯ = ತಂದು. ತತ್, ಗತ, ಔಷಧ, ವಾಯುನಾ = ಆ ಗಂಧಮಾದನ ಪರ್ವತದಲ್ಲಿ, ಇದ್ದ ಮೃತ ಸಂಜೀವಿನ್ಯಾ ದ್ಯೌಷದದ, ಗಾಳಿಯಿಂದ. ಅಜೀವಯತ್= ಬದುಕಿಸಿದರು ॥೧೫॥

ಅಸಂಖ್ಯಾನಿತಿ॥ ರಾಮಃ, ನವಿದ್ಯತೇಸಂಖ್ಯಾ ಸಂಖ್ಯಾಪರಿಚ್ಛೇದಃ ಯೇಷಾಂ ತಾನ್, ರಾಕ್ಷಸಾನ್, ಕುಂಭಕರ್ಣಂ ರಾವಣಾನುಜಂ, ರಾವಣಂ ಚಹತ್ವಾ, ವಿಭೀಷಣಂ ರಾವಣಾನುಜಂ, ರಕ್ಷಸಾಂ ಸಾಮ್ರಾಜ್ಯೇ ಆಧಿಪತ್ಯೇ, ಅಭ್ಯಷೇಚಯತ್। ಷಿರಕ್ಷಣೇ - ಧಾ.ಸಕ. ಣಿಜಂತ. ಕರ್ತರಿಲಙ್ ಪರ. ಪ್ರ.ಏ। ಅಭ್ಯಚಿ ಕಲ್ಪಪದಿತ್ಯಪಿಕ್ವಚಿತ್ ಪಾಠಃ ॥೧೬॥

**ಅಸಂಖ್ಯಾನ್ ರಾಕ್ಷಸಾನ್ ಹತ್ವಾ ಕುಂಭಕರ್ಣಂ ಚ ರಾವಣಮ್।**
**ರಾಮೋ ವಿಭೀಷಣಂ ರಕ್ಷಸಾಮ್ರಾಜ್ಯೇ ಸೋಽಭ್ಯಷೇಚಯತ್॥೧೬॥**

ಅರ್ಥ:- ಸಃ = ಪ್ರಸಿದ್ಧರಾದ. ರಾಮಃ = ರಾಮದೇವರು ಅಸಂಖ್ಯಾನ್ = ಸಂಖ್ಯಾ ರಹಿತರಾದ ರಾಕ್ಷಸಾನ್ = ರಾಕ್ಷಸರನ್ನು ಕುಂಭಕರ್ಣಂ = ಕುಂಭಕರ್ಣನನ್ನು ರಾವಣಂ ಚ = ರಾವಣನನ್ನು ಕೂಡ. ಹತ್ವಾ = ಸಂಹರಿಸಿ. ವಿಭೀಷಣಂ = ವಿಭೀಷಣನನ್ನು ರಕ್ಷಃ ಸಾಮ್ರಾಜ್ಯೇ = ರಾಕ್ಷಸರ, ರಾಜ್ಯದಲ್ಲಿ ಅಭಿಷೇಚಯತ್ = ಅಭಿಷೇಕ ಮಾಡಿಸಿದರು ॥೧೬॥

ಅಶೋಕೇತಿ॥ ರಾಮಃ ಅಶೋಕಸ್ಯತನ್ನಾಮಕವನಸ್ಯ ಮೂಲಂ ಸಮೀಪಂ, ಆಸಾದ್ಯ ಪ್ರಾಪ್ಯ, ನಿತ್ಯಂಸದಾವಿಯೋಗಿನೀಂ ಸ್ವಾವಿರಹಿಣೀಂ ದೇವೀಂ, ಜಾನಕೀಂ ಜನಕಪುತ್ರೀಂ ಸೀತಾಂ, ಮಂದಾನಾಮಜ್ಞಾನಿನಾಂ ದೃಶಾಂ ದೃಷ್ಟೀನಾಮಪಿ, ಯದ್ವಾ-ಮಂದಾಸ್ವಲ್ಪಾದೃರ್ಕ್ ಜ್ಞಾನಂ ಯೇಷಾಂ ತೇಷಾಮಪಿ, ದರ್ಶಮಾಮಾಸ। ದೃಶಿರ್ ಪ್ರೇಕ್ಷಣೇ - ಧಾ. ಣಿಚಿಂತ. ಕರ್ತರಿಲಿಟ್, ಪರ, ಪ್ರ, ಏ। ರಾಮಸ್ಯಾಶೋಕ ವನಗಮನಂ ರಾಮಾಯಣದ್ಯನುಕ್ತಮಪಿ ಭಾಗವ ತೋಕ್ತ ತ್ವಾನ್ನ ಕಲ್ಪಿತ ಮಿತಿ ಧ್ಯೇಯಮ್ ॥೧೭॥

**ಅಶೋಕಮೂಲ ಮಾಸಾದ್ಯ ದರ್ಶಮಾಮಾಸಜಾನಕೀಮ್ ।**
**ನಿತ್ಯಾಽವಿಯೋಗಿ ನೀಂ ದೇವೀಂ ರಾಮೋಮಂದ ದೃಶಾಮಪಿ ॥೧೭॥**

ಅರ್ಥ:- ರಾಮಃ = ರಾಮದೇವರು. ಅಶೋಕ, ಮೂಲಂ = ಅಶೋಕ ನಾಮಕವಾದ ವನದ, ಸಮೀಪವನ್ನು ಆಸಾದ್ಯ = ಹೊಂದಿ ನಿತ್ಯ. ಅವಿಯೋಗಿನೀಂ = ನಿರಂತರದಲ್ಲಿ, (ಪತಿಯು) ವಿಯೋಗವಿಲ್ಲದಂಥಾ ದೇವೀಂ = ಕ್ರೀಡಾದಿ ಗುಣಯುಕ್ತರಾದ ಜಾನಕೀಂ = ಜನಕಪುತ್ರಿಯಾದ ಸೀತಾದೇವಿಯವರನ್ನು ಮಂದ, ದೃಶಾಮಪಿ = ಅಜ್ಞ ಜನರ, ದೃಷ್ಟಿಗಳಿಗೂ (ಅಥವಾ) ಸ್ವಲ್ಪವಾದ ಜ್ಞಾನವುಳ್ಳ ಜನರಿಗೂ, ದರ್ಶಿಯ ಮಾಸ = ತೋರಿಸಿದರು ॥೧೭॥

ಹನುಮದಿತಿ॥ ಪುರುಷಾಭ್ಯಾಂ ಕ್ಷರಾಕ್ಷರಾಭ್ಯಾಮುತ್ತಮಃ, ರಾಮಃ, ಹನುಮತ್ತ್ರಮುಖ್ಯೈಃ ಕಪಿಭಿಃ, ದೇವ್ಯಾ ಸೀತಯಾಚ, ಸಾರ್ಧಂ ಸಹ ಪುಷ್ಪಕಂ ವಿಮಾನಂ, ಆರುಹ್ಯ, ನಿಜಾಂನಗರೀಂ ಅಯೋಧ್ಯಾಂ ಜಗಾಮ॥ ಗಮಲೃಗತೌ - ಧಾ. ಸಕ. ಕರ್ತರಿಲಿಟ್. ಪರ. ಪ್ರ.ಏ ॥೧೮॥

**ಹನುಮತ್ಪ್ರಮುಖೈಸ್ಸಾರ್ಧಂ ದೇವ್ಯಾಚ ಪುರುಷೋತ್ತಮಃ ।**
**ಆರುಹ್ಯ ಪುಷ್ಪಕಂ ರಾಮೋಜಗಾಮ ನಗರೀಂ ನಿಜಾಮ್ ॥೧೮॥**

ಅರ್ಥ:- ಪುರುಷ, ಉತ್ತಮಃ = ಕ್ಷರಾಕ್ಷರ ಪುರುಷರ ದೆಸೆಯಿಂದ, ಉತ್ತಮರಾದ ರಾಮಃ = ರಾಮ ದೇವರು. ಹನುಮತ್, ಪ್ರಮುಖೈಃ = ಹನುಮಂತ ದೇವರು, ಮೊದಲಾಗಿವುಳ್ಳ ಕಪಿಗಳಂದ. ದೇವ್ಯಾಚ = ಸೀತಾದೇವಿಯಿಂದ ಕೂಡ ಸಾರ್ಧಂ = ಕೂಡಿ ಪುಷ್ಪಕಂ = ಪುಷ್ಪಕ ವಿಮಾನವನ್ನು ಆರುಹ್ಯ = ಏರಿ. ನಿಜಾಂ = ಸ್ವಕೀಯವಾದ ನಗರೀಂ = ಅಯೋಧ್ಯಾಪುರವನ್ನು ಕುರಿತು ಜಗಾಮ = ಹೋದರು ॥೧೮॥

ಭರತಇತಿ॥ ಭಕ್ತ್ಯಾ ರಾಮವಿಷಯಿಣ್ಯಾ ಭರಿತಃ, ಭರತಃ, ರಾಮಂ, ಅಭ್ಯೇತ್ಯ ಪ್ರಾಪ್ಯ, ಸ್ಯನಿರ್ವೃತಃ ಸಂತುಷ್ಟಸ್ಸನ್, ಕೃಷ್ಣಸ್ಯ ಪಾದಯೋಃ ಶ್ವಫಲ್ಕಾತ್ತನ್ನಾಮಕಾದ್ಯಾದ ವಾಜ್ಞಾತೋಽಕ್ರೂರ ಇವ, ತಸ್ಯರಾಮಶ್ಯ ಪಾದಯೋಃ ಪಪಾತ। ಪತಲೃಪತನೇ - ಧಾ. ಅಕ. ಕರ್ತರಿಲಟ್. ಪರ. ಪ್ರ. ॥ ರಾಮಪಾದಾವನಮದಿತಿ ಭಾವಃ ॥೧೯॥

**ಭರತೋಭಕ್ತಿ ಭರಿತೋ ರಾಮಮಭ್ಯೇತ್ಯ ನಿರ್ವೃತಃ ।**
**ಪಪಾತ ಪಾದಯೊ ಸ್ತಸ್ಯ ಕೃಷ್ಣ ಸ್ಯೇವ ಶ್ವಫಲ್ಕಜಃ ॥೧೯॥**

ಅರ್ಥ:- ಭಕ್ತಿಭರಿತಃ = (ರಾಮ ದೇವರಲ್ಲಿ) ವಿಶ್ವಾಸದಿಂದ ಪೂರ್ಣನಾದ. ಭರತಃ = ಭರತನು. ರಾಮಂ = ರಾಮದೇವರನ್ನು ಅಭ್ಯೇತ್ಯ = ಹೊಂದಿ ನಿರ್ವೃತಃ (ಸನ್)= ಸಂತುಷ್ಟನಾಗಿ. ಕೃಷ್ಣಸ್ಯ = ಕೃಷ್ಣದೇವರ. ಪಾದಯೋಃ = ಪಾದಗಳಲ್ಲಿ ಶ್ವಫಲ್ಕಜ, ಇವ = ಶ್ವಫಲ್ಕ ನಾಮಕ ಯಾದವನ ದೆಸೆಯಿಂದ, ಹುಟ್ಟಿದ ಅಕ್ರೂರನೋ ಪಾದಿಯಲ್ಲಿ ತಸ್ಯ = ಆ ರಾಮ ದೇವರ. ಪಾದಯೋಃ = ಪಾದಗಳಲ್ಲಿ ಪಪಾತ = ಬಿದ್ದನು (ವಂದಿಸಿದನೆಂತಭಾವ) ॥೧೯॥

ತಮಿತಿ ॥ ರಘೋರ್ಗೋತ್ರಾಪತ್ಯಂಪುಮಾನ್ ರಾಘವಃ, ರಾಮಃ, ತಂ ಭರತಂ, ಉತ್ಥಾಪ್ಯ, ಪರಿಷ್ವಜ್ಯ ಆಲಿಂಗ್ಯ, ಸರ್ವೈಃ ಜನ್ಯೈಃ, ಸಂಪೂಜಿತಃ ಸನ್, ಅಂತಪುರಂ ಗತಸ್ಸನ್, ಜನನೀಂ ಕೌಸಲ್ಯಾಂ, ಅಭ್ಯವಂದತ ಅನಮತ್। ವದಿ ಅಭಿವಾದನ ಸ್ತುತ್ಯೋಃ-ಧಾ.ಸಕ.ಕರ್ತರಿ ಲಙ್.ಆತ್ಮ.ಪ್ರ.ಏ॥೨೦॥

**ತಮುತ್ಥಾಪ್ಯ ಪರಿಷ್ವಜ್ಯ ರಾಘವೋಂತಃ ಪುರಂಗತಃ ।**
**ಸಂಪೂಜಿತೋ ಜನ್ಯೈಸ್ಸರ್ವೈರ್ಜನನೀ ಮಭ್ಯವಂದತ ॥೨೦॥**

ಅರ್ಥ:- ರಾಘವಃ = ರಘುಕುಲೋತ್ಪನ್ನರಾದ ರಾಮದೇವರು ತಂ = ಆ ಭರತನನ್ನು ಉತ್ಥಾಪ್ಯ = ಎಬ್ಬಿಸಿ ಪರಿಷ್ವಜ್ಯ = ಆಲಿಂಗನ ಮಾಡಿಕೊಂಡು ಸರ್ವೈಃ = ಸಮಸ್ತರಾದ ಜನ್ಯೈಃ = ಜನರಿಂದ ಸಂಪೂಜಿತಃ (ಸನ್) = ಮಾನ ಮಾಡಿಸಿಕೊಳ್ಳಲ್ಪಟ್ಟವರಾಗಿ ಅಂತಃಪುರಂ = ರಾಣಿ ವಾಸಸ್ಥಳವನ್ನು ಕುರಿತು. ಗತಃ (ಸನ್) = ಹೋದವರಾಗಿ ಜನನೀಂ = ತಾಯಿಯಾದ ಕೌಸಲ್ಯಾ ದೇವಿಯನ್ನು ಅಭ್ಯವಂದತ = ನಮಸ್ಕರಿಸಿದರು ॥೨೦॥

ರಾಮ ಇತಿ॥ ರಾಮಃ, ರಾಜ್ಯೇ ಅಭಿಷಿಕ್ತಸ್ಸನ್, ಜಗತೀಂ ಭೂಮಿಂ ಶಶಾಸ ಪಾಲಯಾಮಾಸ। ಶಾಸು ಅನುಶಿಷ್ಟಾ-ಧ.ಸಕ.ಕರ್ತರಿ ಲಿಟ್.ಪರ.ಪ್ರ.ಏ। ಧರ್ಮಾನ್ ವರ್ಣಾಶ್ರಮೋಚಿತಾನ್, ಅಶಿಕ್ಷಯತ್ ಸ್ವಾಚಾರೇಣ ಕರ್ತವ್ಯತಯಾ ಗ್ರಾಹಯಾಮಾಸ। ಜನಾನಿತಿ ಶೇಷಃ। ಣ್ಯಂತತಯಾ ದ್ವಿಕರ್ಮತಾ। ಶಿಕ್ಷವಿದ್ಯೋಪಾದಾನೇ-ಧಾ.ಸಕ.ಕರ್ತರಿ ಲಙ್.ಪರ.ಪ್ರ.ಏ॥ ಪೂರ್ಣಃ ದೇಶ ಕಾಲಗುಣೈರ್ವಾಪ್ತಃ, ಸುಖೀ, ಪ್ರಭುಃ ಸಮರ್ಥೋ ರಾಮಃ, ಸಂಪದಃ ಸಂಮೃದ್ಧೀಃ, ಬುಭುಜೇ। ಭುಜ ಪಾಲನಾಭ್ಯವಹಾರಯೋಃ-ಧಾ.ಸಕ.ಕರ್ತರಿ ಲಿಟ್.ಆತ್ಮ.ಪ್ರ.ಏ॥೨೧॥

**ರಾಮೋ ರಾಜ್ಯಾಭಿಷಕ್ತಸ್ಸನ್ ಚ್ಛಶಾಸ ಜಗತೀಂ ಪ್ರಭುಃ।**
**ಧರ್ಮಾನ ಶಿಕ್ಷಯ ತ್ಪೂರ್ಣೋಭುಭುಜೇ ಸಂಪದಸ್ಸುಖೀ॥೨೧॥**

ಅರ್ಥ:- ರಾಮಃ = ರಾಮದೇವರು. ರಾಜ್ಯೇ, ಅಭಿಷಿಕ್ತಃ (ಸನ್) = ರಾಜ್ಯದಲ್ಲಿ, ಅಭಿಷೇಕ ಮಾಡಿಸಿಕೊಳ್ಳಲ್ಪಟ್ಟವರಾಗಿ, ಜಗತೀಂ = ಭೂಮಿಯನ್ನು ಶಶಾಸ = ರಕ್ಷಿಸಿದರು. ಧರ್ಮಾನ್ = ವರ್ಣಾಶ್ರಮೋಚಿತ ಧರ್ಮಗಳನ್ನು (ಜನಾನ್ = ಜನರನ್ನು) ಅಶಿಕ್ಷಯತ್ = (ತಮ್ಮ ಆಚಾರದಿಂದ) ತಿಳಿಯುವಂತೆ ಮಾಡಿದರು. ಪೂರ್ಣಃ = ಪೂರ್ಣರಾದ. ಸುಖೀ = ಸುಖವುಳ್ಳವರಾದ ಪ್ರಭುಃ = ಸಮರ್ಥರಾದ ರಾಮದೇವರು ಸಂಪದಃ ವೈಭವಗಳನ್ನು ಬುಭುಜೇ = ಅನುಭವಿಸಿದರು ॥೨೧॥

ಸನಕೇತಿ॥ ಮಾರಿರ್ತಿಹನುಮಾನ್, ರಾಮಸ್ಯ ಅಂತಿಕೇ ಸಮೀಪೇ ಸನಕಾದೀನ್ ಮುನೀಂಶ್ಚ, ತೇಷಾಂ ಸನಕಾದೀನಾಂ ವಂಶ್ಯಾನ್ ಉಪದೇಶ ಪರಂಪರಾತ್ಮಕ ವಂಶೀ ಭವಾನ್, ಅನ್ಯಾನ್ ದುರ್ವಾಸಃ ಪ್ರಭೃತೀನ್ ಮುನೀಂಶ್ಚ, ಶ್ರುತೀನಾಂ ವೇದಾನಾಂ ವ್ಯಾಖ್ಯಾ ವಿಶೇಷಾನ್ ವ್ಯಾಖ್ಯಾನ ಪ್ರಭೇದಾನ್, ಸಮಶಿಕ್ಷಯತ್ ಗ್ರಾಹಯಾಮಾಸ। ದ್ವಿಕರ್ಮಕ ಪ್ರಯೋಗಃ॥೨೨॥

**ಸನಕಾದೀಂಶ್ಚ ತದ್ವಂಶ್ಯಾನ್ಮುನೀನನ್ಯಾಂಶ್ಚ ಮಾರುತಿಃ।**
**ರಾಮಾಂತಿಕೇಶ್ರುತಿ ವ್ಯಾಖ್ಯಾ ವಿಶೇಷಾಂತ್ಸಮ ಶಿಕ್ಷಯತ್॥೨೨॥**

ಅರ್ಥ:- ಮಾರುತಿಃ = ವಾಯುಪುತ್ರರಾದ ಹನುಮಂತ ದೇವರು ರಾಮ, ಅಂತಿಕೇ = ರಾಮದೇವರ ಸಮೀಪದಲ್ಲಿ ಸನಕ, ಆದೀಂಶ್ಚ = ಸನಕರೇ, ಮೊದಲಾಗಿವುಳ್ಳ ಋಷಿಗಳನ್ನೂ, ತತ್, ವಂಶ್ಯಾನ್ = ಆ ಸನಕಾದಿಗಳ, ವಂಶದವರಾದ ಅನ್ಯಾನ್ = ಮತ್ತು ಕೆಲವರಾದ ಮುನೀಂಶ್ಚ = ದುರ್ವಾಸರು ಮೊದಲಾದ ಋಷಿಗಳನ್ನು ಕೂಡ ಶ್ರುತಿ, ವ್ಯಾಖ್ಯಾ, ವಿಶೇಷಾನ್ = ವೇದಗಳ, ವ್ಯಾಖ್ಯಾನಗಳ, ಪ್ರಭೇದಗಳನ್ನು ಸಮಶಿಕ್ಷಿಯತ್ = ಉಪದೇಶದಿಂದ ತಿಳಿಯಪಡಿಸಿದರು ॥೨೨॥

ಸುರಾಣಕಾನಿತಿ॥ ಸ ರಾಮಃ, ಸುರಾಣಕಾನ್ ತನ್ನಾಮಕಾನ್ ದೈತ್ಯಾನ್, ತಮಃ ನರಕಂ, ನೇತುಂ ಪ್ರಾಪಯಿತುಂ, ಜಾನಕೀಂ ಸೀತಾಂ, ತತ್ಯಾಜೇವ। ವಸ್ತು ತಸ್ತುನ ತ್ಯಾಗ ಇತಿ ಭಾವಃ। ತ್ಯಜಹಾನೌ_ಧಾ.ಸಕ.ಕರ್ತರಿ ಲಿಟ್.ಪರ.ಪ್ರ.ಏ। ತ್ಯಾಗಾಭಾವಂ ಸಮರ್ಥಯತಿ-ವ್ಯಾಪ್ತತ್ವಾದಿತಿ। ತಸ್ಯಾ ಸೀತಾಯಾಃ, ವ್ಯಾಪ್ತತ್ವಾತ್ ಪರಮ ಮಹತ್ಪರಿಮಾಣವತ್ವಾತ್, ನಿರವದ್ಯತ್ವಾತ್ ದೋಷರಹಿತತ್ವಾಚ್ಚ, ತ್ಯಾಗಃ ಸ್ವಸಮೀಪದೇಶಾನಿರ್ಯಾಪಣಂ, ಕಥಂ ಭವೇತ್। ನ ಕಥಮಪೀತ್ಯರ್ಥಃ॥೨೩॥

**ಸುರಾಣಕಾಂ ಸ್ತಮೋನೇತುಂ ತತ್ಯಾಜೇವ ಸಜಾನಕೀಮ್।**
**ವ್ಯಾಪ್ತತ್ವಾನ್ನಿರವದ್ಯತ್ವಾತ್ತಸ್ಯಾಸ್ತ್ಯಾಗಃ ಕಥಂ ಭವೇತ್॥೨೩॥**

ಅರ್ಥ:- ಸಃ = ಆ ರಾಮದೇವರು ಸುರಾಣಕಾನ್ = ಸುರಾಣಕರೆಂತೆಂಬುವ ದೈತ್ಯರನ್ನು ತಮಃ = ನರಕವನ್ನು ನೇತುಂ = ಹೊಂದಿಸುವುದಕ್ಕೋಸ್ಕರ ಜಾನಕೀಂ = ಜನಕ ಪುತ್ರಿಯಾದ ಸೀತಾದೇವಿಯವರನ್ನು, ತತ್ಯಾಜೇವ = ಬಿಟ್ಟವರಂತೆ ಇದ್ದರು.

ತಸ್ಯಾಃ = ಆ ಸೀತಾ ದೇವಿಯವರಿಗೆ ವ್ಯಾಪ್ತ ತ್ವಾತ್ = ವ್ಯಾಪ್ತತ್ವದ ದೆಸೆಯಿಂದ ನಿರವದ್ಯತ್ವಾತ್ = ದೋಷ ರಹಿತತ್ವದ ದೆಸೆಯಿಂದ ಕೂಡ ತ್ಯಾಗಃ = ಬಿಡೋಣವು ಕಥಂ = ಹೇಗೆ ಭವೇತ್ = ಆ ದೀತು ॥ ೨೩॥

ಸ್ವಾತ್ಮನಮಿತಿ॥ ಅಥ ಸೀತಾ ತ್ಯಾಗಾನಂತರಂ, ಸ ರಾಮಃ, ಸ್ವಾತ್ಮಾನಂ ಸ್ವಸ್ವರೂಪಂ. ಯಜ್ಞಪುರುಷಂ ಯಜ್ಞನಾಮಕಂ ಪೂರ್ಣಷಡ್ಗುಣಂ ಶ್ರೀನಾರಾಯಣಂ, ಯಜ್ಞೇನ ಅಶ್ವಮೇಧಾದಿನಾ, ಅಯಜತ ಪ್ರೀಣಯಾಮಾಸ। ಯಜ ದೇವ ಪೂಜಾ ಸಂಗತಿ ಕರಣದಾನೇಷು–ಧಾ.ಸಕ.ಕರ್ತರಿ ಲಙ್.ಆತ್ಮ.ಪ್ರ.ಏ। ಸತೀ ನಿರ್ದೋಷಾ, ಸೀತಾ, ತತ್ರಯಜ್ಞಸ್ಥಲೇ ಆಗತಾ ಸತಿ, ವೇದ್ಯಾಂ ಯಜ್ಞಾರ್ಥಂ ಪರಿಷ್ಕೃತಾಯಾಂಭುವಿ. ಅಂತರ್ದಧೆ ಅದೃಶ್ಯಾ ಅಭೂತ್ಕಿಲ॥೨೪॥

**ಸ್ವಾತ್ಮಾನಂ ಯಜ್ಞಪುರುಷಂ ಯಜ್ಞೇನಾಯಜತಾಥಸಃ।**
**ತತ್ರಾಗತಾ ಸತೀಸೀತಾ ವೇದ್ಯಾಮಂತರ್ದಧೇಕಿಲ॥೨೪॥**

ಅರ್ಥ:- ಅಥ = ಸೀತಾ ತ್ಯಾಗಾ ನಂತರದಲ್ಲಿ. ಸಃ = ಆ ರಾಮದೇವರು. ಸ್ವ, ಆತ್ಮಾನಂ = ತಮ್ಮ, ಸ್ವರೂಪ ಭೂತರಾದ, ಯಜ್ಞ, ಪುರುಷಂ = ಯಜ್ಞನೆಂಬುವ, ಪುರುಷನಾದ ನಾರಾಯಣ ದೇವರನ್ನು ಯಜ್ಞೇನ = ಅಶ್ವಮೇಧಾದಿ ಯಜ್ಞದಿಂದ. ಅಯಜತ್ = ಸಂತೋಷ ಪಡಿಸಿದರು. ಸತೀ = ದೋಷರಹಿತರಾದ. ಸೀತಾ = ಸೀತಾದೇವಿಯವರು ತತ್ರ = ಆ ಯಜ್ಞಸ್ಥಳದಲ್ಲಿ. ಆಗತಾ (ಸತೀ) = ಬಂದವರಾಗಿ. ವೇದ್ಯಾಂ = ಯಜ್ಞವೇದಿಯಲ್ಲಿ. ಅಂತದರ್ಧೇ ಕಿಲ = ಅ ದೃಶ್ಯರಾದರಂತೆ ॥೨೪॥

ಧರ್ಮಮಿತಿ॥ ರಾಘವಃ ರಾಮಃ, ಧರ್ಮಂ ವರ್ಣಾಶ್ರಮಧರ್ಮ ಪ್ರತಿಪಾದಕಶಾಸ್ತ್ರಂ, ಸಾಂಖ್ಯಾಂ ಜ್ಞಾನಯೋಗಂ ಚ, ಯೋಗಂಚ ಕರ್ಮಯೋಗ ಶಾಸ್ತ್ರಂಚ, ವರ್ತಯಾಮಾಸ ಪ್ರಾವರ್ತಯತ್। ವೃತುವರ್ತನೇ–ಧಾ.ಸಕ.ಕರ್ತರಿ.ಲುಙ್.ಪರ.ಪ್ರ.ಏ। ತದಾ ಸಂಪದಸಮೃದ್ಧಯಃ, ನನೃತುಃ ಪ್ರಕಟಿತಾ ಬಭೂವುಃ। ನೃತಿಗಾತ್ರ ವಿಕ್ಷೇಪೇ–ಧಾ.ಸಕ.ಕರ್ತರಿ ಲಿಟ್.ಪರ.ಪ್ರ.ಬ॥೨೫॥

**ಧರ್ಮಂ ಸಾಂಖ್ಯಾಂ ಚ ಯೋಗಂ ಚ ವರ್ತಯಾಮಾಸ ರಾಘವಃ।**
**ಪ್ರಾವೋಚನ್ಮರುತಸ್ತೂನುಸ್ಸಂಪದೋ ನನೃತುಸ್ತದಾ॥೨೫॥**

ಅರ್ಥ:- ರಾಘವಃ = ರಘುಕುಲೋತ್ತ್ವನ್ನರಾದ ರಾಮದೇವರು. ಧರ್ಮಂ = ವರ್ಣಾಶ್ರಮ ಧರ್ಮಗಳನ್ನು ಪ್ರತಿಪಾದಿಸುವ ಶಾಸ್ತ್ರವನ್ನು. ಸಾಂಖ್ಯಂಚ = ಜ್ಞಾನ ಯೋಗಶಾಸ್ತ್ರವನ್ನೂ ಯೋಗಂಚ = ಕರ್ಮ ಯೋಗ ಶಾಸ್ತ್ರವನ್ನು ಕೂಡ. ವರ್ತಯಾಮಾಸ = ಪ್ರವರ್ತನ ಮಾಡಿಸಿದರು. ಮರುತಃ = ವಾಯು ದೇವರ ಸೂನುಃ = ಮಗನಾದ ಹನುಮಂತ ದೇವರು ಪ್ರಾವೋಚತ್ = ಪ್ರವಚನ ಮಾಡಿದರು. ತದಾ = ಆ ಕಾಲದಲ್ಲಿ ಸಂಪದಃ = ಐಶ್ವರ್ಯಗಳು ನನೃತುಃ = ನರ್ತನ ಮಾಡಿದವು ॥೨೫॥

ಪ್ರಕೃತ್ಯೇತಿ॥ ಪ್ರಕೃತ್ಯಾಸ್ವಭಾವೇನ, ಜನ್ಮಾರಭ್ಯೇತ್ಯರ್ಥಃ। ಪರಮಹಂಸಾಃ ಸನ್ಯಾಸಿಭೂತಾಃ, ಬ್ರಹ್ಮಣಃ, ಮಾನಸಾಃ। ಮನಸ್ಸಂಬಧಿನಃ, ಸುತಾಃ ಸನಕಾದ್ಯಾಃ, ತತಃ ಹನುಮತಃ, ಶ್ರುತ್ವಾ, ತತ್ವಂ, ಅಂಜಸಾಸಮ್ಯಕ್, ವ್ಯಾಚಖ್ಯುಃ ಅನ್ಯೇಭ್ಯಪ್ರಾವೋಚನ್। ಚಕ್ಷಿಙ್‌ವ್ಯಕ್ತಾಯಾಂ ವಾಚಿ - ಧಾ.ಸಕ.ಕರ್ತರಿ ಲಿಟ್.ಪರ.ಪ್ರ.ಬ॥೨೬॥

ಪ್ರಕೃತ್ಯಾಪರಮಾಹಂಸಾ ಬ್ರಹ್ಮಣೋ ಮಾನಸಾಸ್ಸುತಾಃ।
ಸನಕಾದ್ಯಸ್ತತಶ್ಶ್ರುತ್ವಾ ವ್ಯಾಚಖ್ಯುಸ್ತತ್ವಮಂಜಸಾ॥೨೬॥

ಅರ್ಥ:- ಪ್ರಕೃತ್ಯಾ = ಸ್ವಭಾವದಿಂದ ಪರಮಾ ಹಂಸಾಃ = ಪರಮಹಂಸನಾಮಕ ಸಂನ್ಯಾಸಿಗಳಾದ. ಬ್ರಹ್ಮಣಃ = ಬ್ರಹ್ಮದೇವರಿಗೆ ಮಾನಸಾಃ = ಮನಸ್ಸಿನಿಂದ ಹುಟ್ಟಿದವರಾದ ಸುತಾಃ = ಮಕ್ಕಳಾದ ಸನಕ. ಆದ್ಯಾಃ = ಸನಕರು, ಮೊದಲಾಗಿವುಳ್ಳವರು ತತಃ = ಆ ಹನುಮಂತ ದೇವರ ದೆಸೆಯಿಂದ ಶ್ರುತ್ವಾ = (ವೇದಾರ್ಥವನ್ನು) ಶ್ರವಣ ಮಾಡಿ ತತ್ವಂ = ತತ್ವವನ್ನು. ಅಂಜಸಾ = ನೆಟ್ಟಗೆ. ವ್ಯಾಚಖ್ಯುಃ = ವ್ಯಾಖ್ಯಾನ ಮಾಡಿದರು ॥೨೬॥

ನಮ ಇತಿ॥ ರಾಮಾಯ ಮನೋಹರಾಯ, ರಾಮಾಯನಮಃ। ರಾಮ ಮನೊಹರ, ಹೇರಾಮ,ತೇ ತುಭ್ಯಂ ನಮಃ, ಅಸ್ತು ಅಸಭುವಿ-ಲೋಟ್.ಪರ.ಪ್ರ.ಏ.। "ರಾಮನಾಮ ನಮೋಸ್ತುತೇ" ಇತಿ ಪಾಠೇ ಹೇರಾಮ, ತೇ ತುಭ್ಯಂ, ನಾಮ ಪ್ರಾಕಾಶ್ಯೇನ, ನಮಃ ಅಸ್ತು ಇತಿ ವ್ಯಾಖ್ಯೇಯಮ್। ರಾಮಃ ಸ್ವಾಮೀ ಅಸ್ಮಾಕಂ ನಿಯಾಮಕಃ, ರಾ.ಃ, ಗತಿಃ ಪ್ರಾಪ್ಯಃ। ಇತಿ, ಲೋಕಾಜನಾಃ ವಿಚುಕ್ರುಶುಃ ಉಚ್ಚೈರುಕ್ತವಂತಃ ಕೃಶ ಆಹ್ವಾನೇರೋದನೇಚ-ಧಾ.ಅಕ.ಕರ್ತರಿ.ಲಿಟ್.ಪರ.ಪ್ರ.ಬ॥೨೭॥

**ನಮೋ ರಾಮಾಯ ರಾಮಾಯ ರಾಮ ರಾಮ ನಮೋಸ್ತುತೇ।**
**ರಾಮ ಸ್ವಾಮೀ ಗತೀ ರಾಮ ಇತಿ ಲೋಕಾವಿಚುಕ್ರುಶುः॥೨೭॥**

ಅರ್ಥ:- ರಾಮಾಯ = ಮನೋಹರನಾದ ರಾಮಾಯ = ರಾಮದೇವರಿಗೋಸ್ಕರ ನಮः = ನಮಸ್ಕಾರವು. ರಾಮ = ಮನೋಹರನಾದ. ಹೇ ರಾಮ = ಎಲೈರಾಮ ದೇವರೇ ತೇ = ನಿಮಗೋಸ್ಕರ ನಮः = ನಮಸ್ಕಾರವು. ಅಸ್ತು = ಆಗಲಿ. ರಾಮः = ರಾಮದೇವರು. ಸ್ವಾಮೀ = ನಿಯಾಮಕರು ರಾಮः = ರಾಮದೇವರು ಗತಿः = ಗಮ್ಯರು. ಇತಿ = ಈ ರೀತಿಯಾಗಿ ಲೋಕಾः = ಜನರು ವಿಚುಕ್ರುಶುः = ಶಬ್ದ ಮಾಡುತ್ತಿದ್ದರು ॥೨೭॥

ದೇವ ಇತಿ॥ ದೇವः ರಾಮः, ಸ್ವೀಯಂ ಧಾಮ ವೈಕುಂಠ ಸ್ಥಾನಂ, ಜಿಗಮಿಷುರ್ಗಂತು ಮಿಚ್ಛುಸ್ಸನ್, ಸುರೈರ್ದೇವಯಃ, ಅಭ್ಯರ್ಥಿತಃ ಸ್ವಸ್ತಾನ ಮೇಹೀತಿ ಪ್ರಾರ್ಥಿತೋಽಭೂತ್ ದೇವಸ್ಯಜಿಗಮಿಷಾಂ ವಿಜ್ಞಾಯ ದೇವಾಃ ಪ್ರಾರ್ಥಿತವಂತ ಇತಿ ಭಾವः। ರಾಮೇಣಚೋದಿತः ಆದೌ ತ್ವಂ ಗಚ್ಛೇತಿ ಪ್ರೇರಿತः, ಲಕ್ಷ್ಮಣः ಶೇಷೋಭೂತ್ವಾ, ದುಗ್ಧಾಬ್ಧಿಂ ಕ್ಷೀರಸಮುದ್ರಂ, ಪ್ರಯಯೌ॥೨೮॥

**ದೇವೋಜಿಗಮಿಷುರ್ಧಾಮ ಸ್ವೀಯಮಭ್ಯರ್ಥಿತಸ್ಸುರೈः।**
**ದುಗ್ಧಾಬ್ಧಿಂ ಪ್ರಯಯೌಶೇಷೋಲಕ್ಷ್ಮಣೋ ರಾಮಚೋದಿತः॥೨೮॥**

ಅರ್ಥ:- ದೇವः = ರಾಮದೇವರು ಸ್ವೀಯಂ = ಸ್ವಕೀಯವಾದ, ಧಾಮ = ವೆಂಕುಠಾಖ್ಯ ಸ್ಥಾನವನ್ನು ಕುರಿತು ಜಿಗಮಿಷುः (ಸನ್) = ಪ್ರಯಾಣ ಮಾಡಲಿಚ್ಛಿಸಿದವರಾಗಿ ಸುರೈः = ದೇವತೆಗಳಿಂದ ಅಭ್ಯರ್ಥಿತः = (ಸ್ವಸ್ಥಾನ ಸೇರುವುದಕ್ಕಾಗಿ) ಪ್ರಾರ್ಥಿತರಾದರು. ರಾಮ, ಚೋದಿತः = ರಾಮದೇವರಿಂದ (ನೀನು ಹೊರಡು ಯೆಂತ) ಪ್ರೇರಿತರಾದ ಲಕ್ಷ್ಮಣः = ಲಕ್ಷ್ಮಣದೇವರು. ಶೇಷः = ಶೇಷ ರೂಪಿಯು (ಭೂತ್ವಾ = ಆಗಿ) ದುಗ್ಧಾಬ್ಧಿಂ = ಕ್ಷೀರ ಸಮುದ್ರವನ್ನು ಪ್ರಯಯೌ = ಸೇರಿದರು ॥೨೮॥

ಸಮಾಯಾತೇತಿ॥ ಹೇಜನಾः, ಯೇಯೇ, ಮೋಕ್ಷಪದಂ ಮುಕ್ತಿಸ್ಥಾನಮಿಚ್ಛಂತೀತಿ ಮೋಕ್ಷಪದೇಚ್ಛವः; ತೇತೇ ಸರ್ವೇಯೂಯಂ, ಸಮಾಯಾತ ಸಮಾಯಾತ। ಆದರಾದ್ವಿರುಕ್ತಿः। ಯಾಪ್ರಾಪಣೇ-ಧಾ.ಸಕ.ಕರ್ತರಿ ಲೋಟ್.ಪರ.ಮ.ಬ.। ಯೇಯ ಇತಿ ವೀಪ್ಸಾಯಾಂ ದ್ವಿವಚನಮ್। ಏಕಪದಂಚೇದಮ್। ಏವಂ, ಸಮಸ್ತಶः ಸರ್ವಾಸು,

ದಿಕ್ಷುಃ, ರಾಮಃ, ದೂತ್ಯೈಃ, ಅಘೋಷಯತ್। ಘುಷಿರ್ ವಿಶಬ್ದೇನ–ಧಾ.ಸಕ.ಕರ್ತರಿ ಲಙ್.ಪರ.ಪ್ರ.ಏ॥೨೯॥

**ಸಮಾಯಾತ ಸಮಾಯಾತ ಯೇ ಯೇ ಮೋಕ್ಷಸಪದೇಚ್ಛವಃ।**
**ಏವಮಾಘೋಷಯ ದ್ರಾಮೋ ದೂತ್ಯೈರ್ದಿಕ್ಷು ಸಮಸ್ತಶಃ॥೨೯॥**

ಅರ್ಥ:– ಹೇಜನಾಃ = ಎಲೈಜನರುಗಳರಾ ಯೇಯೇ = ಯಾರು ಯಾರು ಮೋಕ್ಷ, ಪದ ಇಚ್ಛವಃ = ಮುಕ್ತಿಯ, ಸ್ಥಾನವನ್ನು, ಅಪೇಕ್ಷಿಸುವ ರೋತೇತೇ = ಅಂಥಾ ಸಮಸ್ತರಾದ (ಯೂಯಂ = ನೀವುಗಳು) ಸಮಾಯಾತ ಸಮಾಯಾತ = ಬನ್ನಿರಿ ಬನ್ನಿರಿ. ಏವಂ = ಈ ರೀತಿಯಾಗಿ ಸಮಸ್ತ ಸಃ = ಸಕಲವಾದ ದಿಕ್ಷು = ದಿಕ್ಕುಗಳಲ್ಲಿ ರಾಮಃ = ರಾಮದೇವರು ದೂತ್ಯೈಃ = ಭಟರುಗಳಂದ ಆಘೋಷ ಯತ್ = ಟಮುಕು ಹೊಡಿಸಿದರು ॥೨೯॥

ಅಥೇತಿ॥ ಅಥ ಘೋಷಣಾನಂತರಂ, ದೇವಃ ರಾಮಃ, ಸೀತಯಾ ಪ್ರತ್ಯಕ್ಷತಾಂ ಪ್ರಾಪ್ತಯಾ ಸಹ, ವಾನರಾಃ ಕಪಯ ಆದ್ಯಾ ಯೇಷಾಂ ರಾಕ್ಷಸಾನಾಂತ್ಯೈಃ, ನರಾದ್ಯೈರ್ಮಾನುಷಾದಿಭಿಃ, ಅನಂತತ್ಯೈರ ಪರಿಮಿತ್ಯೈಃ ಜಂತುಭಿಃ ಖಗಮೃಗಾದಿ ಪ್ರಾಣಿಭಿರಪಿ, ವೃತಸ್ಸನ್, ಉತ್ತರಾಂ ದಿಶಂ ಪ್ರತಸ್ಥೇ ಪ್ರಯಯೌ॥ ಷ್ಠಾಗತಿ ನಿವೃತ್ತೌ– ಧಾ.ಲಟ್.ಪ್ರ.ಏ। ಪ್ರಾಪಸ್ಸೃಷ್ಟಾಯಂ ಪ್ರಯಣಾರ್ಥಸ್ಸಕರ್ಮಕಃ ಆತ್ಮನೇಪದೀಚ॥೩೦॥

ಅರ್ಥ:– ಘೋಷಣಾ ನಂತರದಲ್ಲಿ ದೇವಃ = ರಾಮದೇವರು ಸೀತಯಾ = (ಪ್ರತ್ಯಕ್ಷವಿಷಯರಾದ) ಸೀತಾದೇವಿಯವರಿಂದ ಸಹ = ಕೂಡಿ ವಾನರ, ಆದ್ಯೈಃ = ಕಪಿಗಳೇ, ಮೊದಲಾಗಿವುಳ್ಳವರಿಂದ ನರ, ಆದ್ಯೈಃ = ಮನುಷ್ಯರೇ, ಮೊದಲಾಗಿವುಳ್ಳ ಅನಂತ್ಯೈಃ = ಅಪರಿಮಿತರಾದ ಜಂತುಭಿರಪಿ = ಖಗಮೃಗಾದಿ ಪ್ರಾಣಿಗಳಂದಲೂ ವೃ ತಃ (ಸನ್) = ಸುತ್ತು ಕಟ್ಟಿಸಿಕೊಳ್ಳಲ್ಪಟ್ಟವರಾಗಿ ಉತ್ತರಾಂ, ದಿಶಂ = (ತಮ್ಮಪುರಕ್ಕೆ) ಉತ್ತರವಾದ, ದಿಕ್ಕನ್ನು ಕುರಿತು ಪ್ರತಸ್ಥೇ = ಪ್ರಯಾಣ ಮಾಡಿದರು ॥೩೦॥

ತೇಷಾಮಿತಿ॥ ರಾಘವಃ ರಾಮಃ, ತೇಷಾಂ ಸ್ವೇನ ಸಮಾಗತಾನಾಂ ನರಾದೀನಾಂ, ಮೋಕ್ಷಪದಂ ಮೋಕ್ಷಾಯ ಕ್ರಮಭಾವಿ ಮುಕ್ತಯೇ ಪದಂ ವಾಸಾರ್ಹತಯಾ ವ್ಯವಸ್ಥಿತಂ ಸ್ಥಾನಂ॥ವಿ॥ ಪದಂ ವ್ಯವಸ್ಥಿತ ತ್ರಾಣ ಸ್ಥಾನ ಲಕ್ಷ್ಮಾಂಘ್ರೀವ ಸುಷ್ಟಿತ್ಯ ಮರಃ। ದತ್ವಾ.

ಮರುತೋ ವಾಯೋಸ್ಸುತಂ ಹನುಮಂತಂ, ಅಭ್ಯನುಜ್ಞಾಪ್ಯ ಭುವಿ ವರ್ತಸ್ವೇತ್ಯಾದಿಶ್ಯ, ಸೀತಯಾ, ಸಾರ್ಧಂ ಸಹ, ಸ್ವಮಾತ್ಮೀಯಂ, ಪರಮುತ್ತಮಂ, ಪದಂ ಸ್ಥಾನಂ, ವಿವೇಶ, ವಿಶಪ್ರವೇಶನ-ಧಾ.ಸಕ.ಕರ್ತರಿ ಲಟ್.ಪರ.ಪ್ರ.ಏ॥೩೧॥

**ತೇಷಾಂ ಮೋಕ್ಷಪದಂ ದತ್ವಾಭ್ಯನುಜ್ಞಾಪ್ಯ ಮರುತ್ಸುತಮ್।**
**ರಾಘವಸ್ಸೀತಯಾ ಸಾರ್ಧಂ ವಿವೇಶ ಸ್ವಂ ಪರಂ ಪದಮ್॥೩೧॥**

ಅರ್ಥ:- ರಾಘವಃ = ರಘುಕುಲೋತ್ಪನ್ನರಾದ ರಾಮದೇವರು ತೇಷಾಂ = ತಮ್ಮ ಕೂಡ ಬಂದ ಜನರಿಗೆ ಮೋಕ್ಷ, ಪದಂ = (ಕ್ರಮದಿಂದ) ಮೋಕ್ಷ ಹೊಂದುವುದಕ್ಕೋಸ್ಕರ, (ವಾಸ ಮಾಡತಕ್ಕ) ಸ್ಥಲವನ್ನು ದತ್ವಾ = ಕೊಟ್ಟು ಮರುತ್, ಸುತಂ = ವಾಯುದೇವರಿಗೆ ಪುತ್ರರಾದ ಹನುಮಂತ ದೇವರನ್ನು ಅಭ್ಯನುಜ್ಞಾಪ್ಯ = (ಭೂಮಿಯಲ್ಲಿರುವಂತೆ) ಅಪ್ಪಣೆ ಮಾಡಿ ಸೀತಯಾ = ಸೀತಾದೇವಿಯವರಿಂದ ಸಾರ್ಧಂ = ಕೂಡಿ, ಸ್ವಂ = ಸ್ವಕೀಯವಾದ ಪರಂ = ವೈಕುಂಠ ಸ್ಥಾನವನ್ನು ವಿವೇಶ = ಪ್ರವೇಶಿಸಿದರು ॥೩೧॥

ಸತ್ಯೇನೇತಿ॥ ಪ್ರಭಂಜನಸ್ಯ ವಾಯೋರಪತ್ಯಂ ಪುಮಾನ್ ಪ್ರಾಭಂಜನಿರ್ಹನುಮಾನ್, ಸತ್ಯೇನ ಯಥಾರ್ಥವಚನೇನ, ವಿರಕ್ತಿ ವೈರಾಗ್ಯಮಸ್ಯಾ ಅಸ್ತೀತಿ ವಿರಕ್ತಿಮತ್ಯಾ, ಭಕ್ತ್ಯಾಮಹಾತ್ಮ್ಯಜ್ಞಾನ ಪೂರ್ವಕ ಸುದೃಢ-ಸ್ನೇಹೇನ ಚ, ಮತ್ಯಾಯುಕ್ತ್ಯನು ಸಂಧಾನಾ ನಾತ್ಮಕ ಜ್ಞಾನ ಮನನ ಜ್ಞಾನೇನ ಚ, ಧೃತ್ಯಾಧ್ಯೈರ್ಯೇಣ ಚ, ತಪಸ್ಯಯಾ ತಪಶ್ಚರೇಣೇನ ಚ, ತಪಶ್ರೀಯೇತಿ ಪಾಠೇ ತಪಸ್ಸಮೃಧ್ಯೈತ್ಯರ್ಥಃ।ಹವಿಷಾದಶುಗಾರ್ತಿ ಕಾಲೇಷು, ರಾಮ ಮನೋಹರ ರಾಮ॥ಯದ್ವಾ-ಹೇತಿ ಸಂಬೋದನಾರ್ಥೇ, ಅವ್ಯಯನಾಮ ನೇಕಾರ್ಥತ್ವಾತ್। ಹೇರಾಮ ರಾಮ, ಆದರಾದ್ವಿರುಕ್ತಿಃ। ಇತಿ, ಸದಾ ಉಪಗಾಯನ್ ಅಧಿಕ ಮುಚ್ಚರನ್ ಸನ್ ಕಿಂಪುರುಷೇಷು ತನ್ನಾಮಕ ಪ್ರದೇಷೇಷು, ರೇಮೇಕ್ರೀಡೇ। ರಮುಕ್ರೀಡಾಯಾಂ-ಧಾ.ಅಕ.ಕರ್ತರಿ ಲಟ್.ಆತ್ಮ.ಪ್ರ.ಏ॥೩೨॥ ಇತಿತ್ಯಾದಿ ವ್ಯಾಖ್ಯಾತಮ್॥

**ಸತ್ಯೇನ ಭಕ್ತ್ಯಾ ಚ ವಿರಕ್ತಿಮತ್ಯಾ**
**ಮತ್ಯಾ ಚ ಧೃತ್ಯಾ ಚ ತಪಸ್ಯಯಾ ಚ।**
**ಹೇ ರಾಮ ರಾಮೇತಿ ಸದೋಪಗಾಯನ್**
**ಪ್ರಾಭಂಜನಿಃ ಕಿಂ ಪುರುಷೇಷು ರೇಮೇ॥೩೨॥**

ಇತಿ ಶ್ರೀಮತ್ಕವಿಕುಲತಿಲಕ ಶ್ರೀಮತ್ತ್ರಿವಿಕ್ರಮ ಪಂಡಿತಾಚಾರ್ಯ ಸುತ ಶ್ರೀಮನ್ನಾರಾಯಣ ಪಂಡಿತಾಚಾರ್ಯ ವಿರಚಿತಾಯಾಂ

ಮಣಿಮಂಜರ್ಯಾಂ ದ್ವಿತೀಯಸ್ಸರ್ಗಃ

ಅರ್ಥ:- ಪ್ರಾಭಂಜನಿಃ = ವಾಯುಪುತ್ರರಾದ ಹನುಮಂತ ದೇವರು. ಸತ್ಯೇನ = ಯಥಾರ್ಥ ವಚನದಿಂದ ವಿರಕ್ತಿಮತ್ಯಾ = ವೈರಾಗ್ಯವುಳ್ಳ ಭಕ್ತ್ಯಾಚ = ಭಕ್ತಿಯಿಂದ ಕೂಡ ಮತ್ಯಾಚ = ಮನನ ಜ್ಞಾನದಿಂದ ಕೂಡ ಧೃತ್ಯಾ ಚ = ಧೈರ್ಯದಿಂದ ಕೂಡ ತಪಸ್ಯಯಾ ಚ = ತಪಶ್ಚರಣದಿಂದ ಕೂಡ ಹಾ = ವಿಷಾದಾದಿ ಕಾಲದಲ್ಲಿ ರಾಮ = ಮನೋಹರನಾದ ರಾಮ = ರಾಮ ದೇವರೇ ಇತಿ = ಈ ರೀತಿಯಾಗಿ ಸದಾ = ಸರ್ವಕಾಲದಲ್ಲಿ ಉಪಗಾಯನ್ (ಸನ್) = ಗಾನ ಮಾಡುವರಾಗಿ ಕಿಂಪುರುಷೇಷು = ಕಿಂಪುರುಷ ಪ್ರದೇಶಗಳಲ್ಲಿ ರೇಮೇ = ಕ್ರೀಡಿಸಿದರು ॥೩೨॥

ಶ್ರೀಮನ್ನೃಸಿಂಹವರ್ಯಾನುಗ್ರಹಜಪ್ರಜ್ಞಾರಾಘವೇಂದ್ರೇಣ।

ಮಣಿಮಂಜರಿ ಪ್ರಕಾಶೇ ಜನಿತೇ ಪೂರ್ಣೋ ದ್ವಿತೀಯಸರ್ಗೋಽಯಮ್॥

॥ಶ್ರೀ ಕೃಷ್ಣಾರ್ಪಣಮಸ್ತು॥

॥ಶ್ರೀ ರಾಮಚಂದ್ರಾಯ ನಮಃ॥

# ತೃತೀಯ ಸರ್ಗ ಪ್ರಾರಂಭಃ

ಏವಂ "ಮರೀಚಿತ್ರಾದಯಃ" ಇತ್ಯತ್ರ ಕಂಠೋಕ್ತಸ್ಯ ಮರೀಚೇರ್ವಂಶ ಪ್ರಸ್ತಾವೇನ ರಾಮಕಥಾ ಸರ್ಗ ದ್ವಯೇನ ಕೃಷ್ಣಕಥಾ ಸಂಗ್ರಹಾರ್ಥ ಮುಪೋದ್ಘಾತ ವಿಧಯಾ ನಿರೂಪಯತಿ-ಹಿಮಾಂಶೋರಿತ್ಯಾದಿ ನಾ॥ ಅತ್ರೇಃ ಬ್ರಹ್ಮಪುತ್ರಸ್ಯಾತ್ರಿ ಮುನೇಃ ಪುತ್ರಸ್ಯ ನೇತ್ರ ಜಾತ ಸ್ಯ, ಹಿಮಾಂಶೋಶ್ಚಂದ್ರಸ್ಯ, ಬುಧೋ ನಾಮ ಬುಧ ಇತಿ ಪ್ರಸಿದ್ಧಃ, ಸುತಃ, ಅಭವತ್। ತಸ್ಯ ಬುಧಸ್ಯ, ಮಹಾಂಶ್ಚಾಸೌರಾಜಾ ಚ ಮಹಾರಾಜಃ, ಸಮಾಸ್ತಷ್ಟತ್। ಪುರೂರವಾಃ ತನ್ನಾಮಕ ರಾಜಾ, ಪುತ್ರಃ, ವ್ಯಜಾಯತ ಜಾತಃ। ಜನಿಪ್ರಾದುರ್ಭಾವೇ-ಲಙ್.ಆತ್ಮ.ಪ್ರ.ಏ॥೧॥

**ಹಿಮಾಂಶೋರತ್ರಿ ಪುತ್ರಸ್ಯ ಬುಧೋ ನಾಮ ಸುತೋ ಭವತ್।**
**ಪುರೂರವಾ ಮಹಾರಾಜಸ್ತಸ್ಯ ಪುತ್ರೋ ವ್ಯಜಾಯತ॥೧॥**

ಅರ್ಥ:- ಅತ್ರಿ, ಪುತ್ರಸ್ಯ = (ಬ್ರಹ್ಮಪುತ್ರರಾದ) ಅತ್ರಿ, ಋಷಿಗಳಗೆ, (ನೇತ್ರಜಾತನಾದ ಕಾರಣ) ಮಗನಾದಂಥಾ. ಹಿಮಾಂಶೋಃ = ಚಂದ್ರಗೆ. ಬುಧೋನಾಮ = ಬುಧನೆಂತ ಪ್ರಸಿದ್ಧನಾದ. ಸುತಃ = ಮಗನು. ಅಭವತ್ = ಆದನು. ತಸ್ಯ = ಆ ಬುಧಗೆ. ಮಹಾರಾಜಃ = ದೊಡ್ಡ ಅರಸು ಆದ. ಪುರೂರವಃ = ಪುರೂರವ ಎಂತೆಂಬುವ ರಾಜನು. ಪುತ್ರಃ = ಮಗನಾಗಿ ವ್ಯಜಾಯತ = ಹುಟ್ಟಿದನು ॥೧॥

ತಸ್ಯೇತಿ॥ ತಸ್ಯ ಪುರೂರವಃ, ಆಯುಸ್ತದಾಖ್ಯ, ಪುತ್ರಃ ಅಭವತ್। ತಸ್ಯ ಆಯೋಃ, ನ ಹುಷಃ, ನಂದನಸ್ಸುತಃ, ಅಭವತ್। ತಸ್ಯ ನಹುಷಸ್ಯ ಬಲಂ ಶಕ್ತಿ ವೀರ್ಯಂ ಆರಬ್ಧಾಂಜತಗಾಮಿತ್ವಂ ಚಾಸ್ಯಾಸ್ತೀತಿ ತಥೋಕ್ತಃ, ಯಯಾತಿಃ, ನಂದನಃ, ಅಭವತ್॥೨॥

**ತಸ್ಯಾಽಽ ಯುರಭವತ್ಪುತ್ರೋ ನ ಹುಷಸ್ತಸ್ಯನಂದನಃ।**
**ಯಯಾತಿರಭವತ್ತಸ್ಯ ನಂದನೋ ಬಲವೀರ್ಯವಾನ್॥೨॥**

ಅರ್ಥ:- ತಸ್ಯ = ಆ ಪುರೂರವ ಎಂತೆಂಬುವ ರಾಜನಿಗೆ. ಆಯುಃ = ಆಯುರಾಜನು. ಪುತ್ರಃ = ಮಗನು. ಅಭವತ್ = ಆದನು. ತಸ್ಯ = ಆ ಆಯುರಾಜಗೆ. ನಹುಷಃ = ನಹುಷ ರಾಜನು ನಂದನಃ = ಮಗನು. ಅಭವತ್ = ಆದನು. ತಸ್ಯ = ಆನಹುಷ ರಾಜಗೆ. ಬಲ, ವೀರ್ಯವಾನ್ = ಶಕ್ತಿಯು, ಆರಬ್ಧಾಂತ ಗಾಮಿತ್ವವು-ಇವುಗಳುಳ್ಳಂಥಾ. ಯಯಾತಿಃ = ಯಯಾತಿ ರಾಜನು ನಂದನಃ = ಮಗನು ಅಭವತ್ = ಆದನು॥೨॥

ದೇವಾಯಾನೀಮಿತಿ॥ ಸ ಯಯಾತಿಃ, ದೇವಯಾನೀಮ್, ಶರ್ಮಿಷ್ಠಾಂ ಚ ಇತಿ, ಉಭೇದ್ವೇ, ಪ್ರಿಯೇ ಭಾರ್ಯೇ, ಉವಾಹ ಪರಿಣಿನಾಯ। ವಹ ಮಪ್ರಾಪಣೇ- ಧಾ.ಸಕ.ಕರ್ತರಿ ಲಿಟ್.ಪರ.ಪ್ರ.ಏ। ತಯೋರ್ವಂಶಮಾಹ ಪ್ರಥಮೇತಿ॥ ಪ್ರಥಮಾ ದೇವಯಾನಿ, ಉಶನಸಃ ಶುಕ್ರಾಚಾರ್ಯಸ್ಯ ಪುತ್ರೀ। ದ್ವಿತೀಯಾ ಶರ್ಮಿಷ್ಠಾ, ವೃಷಪರ್ವಣಃ ಪಾರ್ಥಿವಸ್ಯ, ಪುತ್ರೀ॥೩॥

**ದೇವಯಾನೀಂಚ ಶೀರ್ಮಿಷ್ಠಾಂ ಸ ಉವಾಹ ಪ್ರಿಯೇ ಉಭೇ ।**
**ಪ್ರಥಮೋಶನಸಃ ಪುತ್ರೀ ದ್ವಿತೀಯಾ ವೃಷ ಪರ್ವಣಃ॥೩॥**

ಅರ್ಥ:- ಸಃ = ಆಯಯಾತಿ ರಾಜನು. ದೇವಯಾನೀಂ = ದೇವಯಾನಿಯನ್ನು ಶರ್ಮಿಷ್ಠಾಂ ಚ = ಶರ್ಮಿಷ್ಠೆಯನ್ನು ಕೂಡ (ಇತಿ = ಈ ರೀತಿಯಾಗಿ) ಉಭೇ = ಇಬ್ಬರಾದ ಪ್ರಿಯೇ = ಹೆಂಡತಿಯರನ್ನು ಉವಾಹ = ವಿವಾಹ ಮಾಡಿಕೊಂಡನು. ಪ್ರಥಮಾ = ಮೊದಲನೆಯವಳಾದ ದೇವಯಾನಿಯು ಉಶನಶಃ = ಶುಕ್ರಾಚಾರ್ಯರ ಪುತ್ರೀ = ಮಗಳು. ದ್ವಿತೀಯಾ = ಎರಡನೇಯಾಕೆಯಾದ ಕರ್ಮಿಷ್ಠೆಯು ವೃಷಪರ್ವಣಃ = ವೃಷಪರ್ವ ರಾಜನಿಗೆ ಪುತ್ರೀ = ಮಗಳು ॥೩॥

ಯದುಂಚೇತಿ॥ ಸಯಯಾತಿಃ, ಯದುಂ ಚ, ತುರ್ವಸುಂ ಚ, ಇತಿ ದ್ವಾವೇವ, ದೇವಯಾನ್ಯಾಂ, ಅಜೀ ಜನತ್ ಜನಯಾಮಾಸ। ದೇವಯಾನೀ ವ್ಯಜಾಯತೇತಿ ಪಾಠೇ ವ್ಯಜಾಯ ತೇ ತ್ಯಂತರ್ಣಿತಣಿಚ್। ಜನಯಾಮಾಸೇತ್ಯರ್ಥಃ। ದುಹ್ಯಂ ಚ, ಅನುಂಚ, ಪೂರೂಂಚ, ಇತಿತ್ರೀನ್, ಶರ್ಮಿಷ್ಠಾಯಾಂ ಅಜೀ ಜನೀತ್॥೪॥

**ಯದುಂ ಚತುರ್ವಸುಂ ಚೈವ ದೇವಯಾನ್ಯಾಮಜೀ ಜನತ್।**
**ದ್ರುಹ್ಯಾಂಚಾನುಂ ಚ ಪೂರುಂ ಚ ಶರ್ಮಿಷ್ಠಾಯಾ ಮಜೀಜನತ್॥೪॥**

ಅರ್ಥ:- (ಸಃ = ಆಯಯಾತಿರಾಜನು) ಯದುಂಚ = ಯದುರಾಜನನ್ನೂ. ತುರ್ವಸುಂಚ = ತುರ್ವಸುರಾಜನನ್ನು ಕೂಡ. (ಇತಿ = ಈ ರೀತಿಯಾಗಿ) ದ್ವಾವೇವ = ಇಬ್ಬರನ್ನೇ. ದೇವಯಾನ್ಯಾಂ = ದೇವಯಾನಿ ದೇವಿಯಲ್ಲಿ. ಅಜೀಜನತ್ = ಹುಟ್ಟಿಸಿದನು. ದ್ರುಹ್ಯ್ಯಾಂಚ = ದ್ರುಹ್ಯರಾಜನನ್ನೂ ಅನುಂಚ = ಅನುರಾಜನನ್ನೂ ಪೂರುಂಚ = ಪೂರು ರಾಜನನ್ನೂ (ಇತಿ = ಈ ರೀತಿಯಾಗಿ) ತ್ರೀನ್ = ಮೂರು ಜನರನ್ನು ಶರ್ಮಿಷ್ಠಾಯಾಂ = ಶರ್ಮಿಷ್ಠಾದೇವಿಯಲ್ಲಿ ಅಜೀಜನತ್ = ಹುಟ್ಟಿಸಿದನು ॥೪॥

ಯದೋರಿತಿ॥ ಯದೋರಾಜ್ಞಃ, ವಂಶೇತು ಕೃತ ವೀರ್ಯಶಸ್ಯಾಪತ್ಯಂ ಪುಮಾನ್ ಕಾರ್ತವೀರ್ಯಃ ಅರ್ಜುನಾಖ್ಯ ಏವ ಪುರೋಗಮಾಃ ಪೂರ್ವೋ ಯೇಷಾಂತೇ, ಭಗವತಿ ಹರೌ ಭಕ್ತಾಃ, ತಪಸಿ ಕಾಯಕ್ಲೇಶಾದಿ ರೂಪೇ ಜ್ಞಾನೇ ಶ್ರವಣ ಮನನಾದಿ ರೋಪೇ ಚ ಪರಾಯಣಾ ಆಸಕ್ತಾಃ, ರಾಜಾನಃ ಬಭೂವುಃ॥೫॥

**ಯದೋರ್ವಂಶೇತು ರಾಜಾನಃ ಕರ್ತವೀರ್ಯ ಪುರೋಗಮಾಃ।**
**ಬಭೂವುರ್ಭಗವದ್ಭಕ್ತಾಸ್ತಪೋಜ್ಞಾನ ಪರಾಯಣಾಃ॥೫॥**

ಅರ್ಥ:- ಯದೋಃ = ಯದುರಾಜನ ವಂಶೇತು = ವಂಶದಲ್ಲಿ ಆದರೆ ಕಾರ್ತವೀರ್ಯ, ಪುರೋಗವಾಃ = (ಕೃತವೀರ್ಯ ಪುತ್ರನಾದ) ಕಾರ್ತವೀರ್ಯಾರ್ಜುನನೇ, ಮೊದಲಾಗಿವುಳ್ಳ, ಭಗವತ್, ಭಕ್ತಾಃ = ಸಮಗ್ರ ಷಡ್ಗುಣ ಪೂರ್ಣನಾದ ಹರಿಯಲ್ಲಿ, ಭಕ್ತರಾದ. ತಪಃ, ಜ್ಞಾನ, ಪರಾಯಣಾಃ = ಕಾಯ ಕ್ಲೇಶಾದಿ ರೂಪ ವ್ರತವು, ಜ್ಞಾನವು- ಇವುಗಳಲ್ಲಿ, ಆಸಕ್ತರಾದ ರಾಜಾನಃ = ಅರಸರು ಬಭೂವುಃ = ಹುಟ್ಟಿದರು ॥೫॥

ಪುರೋರಿತಿ॥ ಪುರೋಸ್ತನ್ನಾಮ್ನೋ ಯಯಾತಿ ಪುತ್ರಸ್ಯ, ವಂಶೇತು, ದುಷ್ಯಂತಿರ್ಭರತ ಏವ ಪೂರ್ವಃ ಯೇಷಾಂತೇ, ರಾಜಾನಃ, ಆಸನ್। ಅಸಭುವಿ-ಲಙ್.ಪರ.ಪ್ರ.ಬ। ತೇಷಾಂ ಭರತಾದೀನಾಂ, ಕೀರ್ತ್ಯಾ ವಿಕ್ರಾಂತ್ಯಾ ಪರಾಕ್ರಮೇಣ ಚ, ಸಮಸ್ತಾಃ, ದಿಶಃ, ಪೂರಿತಾಃ ಪೂರ್ಣಾಃ। ಅತ್ರ ಕಾರ್ತವೀರ್ಯ ಭರತಯೋ

ರೇವಾದಿತ ಯೋಪಾದನಂ, ತಯೋರ್ಭಾರತ ತಾತ್ಪರ್ಯನಿರ್ಣಯಾನುಸಾರೇಣ ಹರ್ಯನುಗ್ರಹ ವಿಶೇಷ ಪಾತ್ರತ್ವಾದಿತಿ ಧ್ಯೇಯಮ್॥೬॥

**ಪುರೋರ್ವಂಶೇತು ರಾಜಾನ ಆಸನ್ ದೌಷ್ಯಂತಿ ಪೂರ್ವಕಾಃ।**
**ತೇಷಾಂಕೀರ್ತ್ಯಾ ಚ ವಿಕ್ರಾಂತ್ಯಾ ಸಮಸ್ತಾಃ ಪೂರಿತಾದಿಶಃ॥೬॥**

ಅರ್ಥ:- ಪುರುರಾಜನ. ವಂಶೇತು = ವಂಶದಲ್ಲಿ ಆದರೆ ದ್ಯೌಷ್ಯಂತಿ, ಪೂರ್ವಾಕಾಃ = ದುಷ್ಯಂತ ಪುತ್ರನಾದ ಭರತನೇ, ಮೊದಲಾಗಿವುಳ್ಳ. ರಾಜಾನಃ = ಅರಸರು. ಆಸನ್ = ಹುಟ್ಟಿದರು. ತೇಷಾಂ = ಆಭರತಾದಿಗಳ ಕೀರ್ತ್ಯಾ = ಯಶಸ್ಸಿನಿಂದ ವಿಕ್ರಾಂನ್ತ್ಯಾಚ = ಪರಾಕ್ರಮದಿಂದಲೂ, ಸಮಸ್ತಾಃ = ಸಕಲವಾದ ದಿಶಃ = ದಿಕ್ಕುಗಳು. ಪೂರಿತಾಃ = ತುಂಬಿಸಲ್ಪಟ್ಟಿದ್ದವು. ॥೬॥

ಭೂಭಾರೇತಿ॥ ತಸ್ಮಿನ್ ಕಾಲೇ, ದ್ಯೌಸ್ವರ್ಗ ಓಕ ಆವಾಸ ಸ್ಥಾನಂ ಯೇಷಾಂತೇ ದಿವೌಕಸೋ ದೇವಾಃ, ಭುವೋ ಭಾರಾಣಾಂ ಕಂಸಾದಿ ದೈತ್ಯಾನಾಂ ಹರಣಂ ನಾಶಮಪೇಕ್ಷಂತ ಇತಿ ತಥೋಕ್ತಾಸ್ಸಂತಃ, ದುಗ್ಧಾಬ್ಧೌ ಕ್ಷೀರಸಮುದ್ರೇ ಶೇತ ಇತಿ ತಾದೃಶಂ, ದೇವಂ ಹರಿಂ, ಉಪೇತ್ಯ ಪ್ರಾಪ್ಯ ಶರಣಂ ಯಯುಃ ತ್ವಂ ನಃ ಪಾಹೀತಿ ಪ್ರಾರ್ಥಿತವಂತಃ। ವಿಷ್ಣುಂ ಶರಣ್ಯಂ ಶರಣಮಿತ್ಯಪಿ ಕ್ವಚಿತ್ಪಾಠಃ॥೭॥

**ಭೂಭಾರ ಹರಣಾಪೇಕ್ಷಾಸ್ತಸ್ಮಿನ್ ಕಾಲೇ ದಿವೌ ಕಸಃ।**
**ದುಗ್ಧಾಬ್ಧಿ ಶಾಯಿನಂ ದೇವಮುಪೇತ್ಯ ಶರಣಂ ಯಯುಃ॥೭॥**

ಅರ್ಥ:- ತಸ್ಮಿನ್, ಕಾಲೇ = ಆ ಕಾಲದಲ್ಲಿ. ದಿವ್, ಓಕಸಃ = ಸ್ವರ್ಗವೇ, ಆವಾಸ ಸ್ಥಾನವಾಗಿವುಳ್ಳ ದೇವತೆಗಳು. ಭೂ, ಭಾರ, ಹರಣ, ಅಪೇಕ್ಷಾಃ (ಸಂತಃ) = ಭೂಮಿಗೆ, ಭಾರವಾದ ದೈತ್ಯರ, ಸಂಹಾರವನ್ನು, ಅಪೇಕ್ಷಿಸುವರಾಗಿ. ದುಗ್ಧಾಬ್ಧಿ, ಶಾಯಿನಂ = ಕ್ಷೀರ ಸಮುದ್ರದಲ್ಲಿ, ಶಯನ ಮಾಡಿರುವ. ದೇವಂ = ಪರಮಾತ್ಮನನ್ನು ಉಪೇತ್ಯ = ಹೊಂದಿ, ಶರಣಂ = ಮೊರೆಯನ್ನು ಯಯುಃ = ಹೊಂದಿದರು ॥೭॥

ವಿಪ್ರೇತಿ॥ ತೇನ ಹರಿಣಾ ಆದಿಷ್ಟಾಃ, ಸಮಸ್ತಶಃ ಸರ್ವೇ ಸುರಾದಯೋ ದೇವಾದ್ಯಾಃ, ಆದಿಪದಾತ್ ಗಂಧರ್ವಾದಿ ಗ್ರಹಣಮ್। ತಸ್ಯ ಹರೇಸ್ಸೇವಾಂ, ವಿದಿತ್ಸಂತಃ

ಕರ್ತುಮಿಚ್ಛಂತಃ, ವಿಪ್ರಕ್ಷತ್ರಾದಿ ಭಾವೇನ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾದಿ ರೂಪೇಣ, ಭುವಿ, ಬಭೂವುಃ ಜಾತಾಃ।ವಿಪ್ರಾ ದ್ರೋಣಾದಯಃ, ಕ್ಷತ್ರಾ ಯುಧಿಷ್ಠಿರಾದಯಃ ವೈಶ್ಯಾ ನಂದಾದಯಃ, ಶೂದ್ರಾ ವಿದುರಾದಯಃ, ಸಂಜಯಾ ದ್ಯಾಸ್ಸೂತಾ ಇತ್ಯಾದಿ ಜ್ಞೇಯಮ್॥ ಭಗವತ್ಸೇವಾಮಿತ್ಯಪಿ ಪಾಠಃ॥೮॥

ವಿಪ್ರಕ್ಷತ್ರಾದಿ ಭಾವೇನ ತದಾದಿಷ್ಟಾಸ್ಸುರಾದಯಃ।
ಬಭೂವುರ್ಭುವಿ ತ ತ್ಸೇವಾಂ ವಿಧಿತ್ಸಂತಸ್ಸಮಸ್ತಶಃ॥೮॥

ಅರ್ಥ:- ತತ್, ಆದಿಷ್ಟಾಃ = ಆಪರಮಾತ್ಮನಿಂದ, ಆಜ್ಞಪ್ತರಾದ ಸಮಸ್ತಶಃ = ಸಕಲರಾದ ಸುರ, ಆದಯಃ = ದೇವತೆಗಳು, ಮೊದಲಾಗಿವುಳ್ಳವರು. ತತ್, ಸೇವಾಂ = ಆ ಹರಿಯ ಸೇವೆಯನ್ನು ವಿಧಿತ್ಸಂತಃ (ಸಂತಃ) = ಮಾಡಲಿಚ್ಛೆಸುವರಾಗಿ ವಿಪ್ರ, ಕ್ಷತ್ರ, ಆದಿ, ಭಾವೇನ = ಬ್ರಾಹ್ಮಣರು, ಕ್ಷತ್ರಿಯರು – ಇವರು ಮೊದಲಾಗಿವುಳ್ಳವರ, ಜನ್ಮದಿಂದ ಭುವಿ = ಭೂಮಿಯಲ್ಲಿ. ಬಭೂವುಃ = ಹುಟ್ಟಿದರು ॥೮॥

ದೇವಾನಾಂ ಭುವ್ಯವತಾರಂ ಪ್ರಪಂಚಯತಿ-ವರುಣ ಇತ್ಯಾದಿನಾ॥ ವರುಣಃ, ಶಂತನುರ್ನಾಮಕ ಶಂತನುರಿತಿ ಪ್ರಸಿದ್ಧಸನ್, ಪುರೋಃ ವಂಶೇ, ವ್ಯಜಾಯತ। ತಸ್ಯ ಶಂತನೋಃ ಚಿತ್ರಾಂಗದಸ್ಯ ಅನುಜಃ ವಿಚಿತ್ರವೀರ್ಯಸ್ತನ್ನಾಮಕಃ ಪುತ್ರಃಆಸೀತ್। ವಿಚಿತ್ರ ವೀರ್ಯಶ್ಚಿತ್ರಾಂಗದ ಇತಿ ದ್ವೌ ಸುತೌ ಶಂತನೋರ ಭೂತಾಮಿತಿ ಭಾವಃ॥೯॥

ವರುಣಶ್ಶಂತನು ರ್ನಾಮ ಪುರೋರ್ವಂಶೇ ವ್ಯಜಾಯತ।
ವಿಚಿತ್ರವೀರ್ಯಸ್ತಸ್ಯಾಸೀತ್ಪುತ್ರ ಶ್ಚಿತ್ರಾಂಗದಾನುಜಃ॥೯॥

ಅರ್ಥ:- ದೇವತೆಗಳು ಭೂಮಿಯಲ್ಲಿ ಅವತರಿಸಿದ ರೀತಿಯನ್ನು ಹೇಳುತ್ತಾರೆ- ವರುಣಃ = ವರುಣ ದೇವರು. ಶಂತನುಃ, ನಾಮ = ಶಂತನುವೆಂತ, ಪ್ರಸಿದ್ಧರಾಗಿ ಪುರೋಃ = ಪುರುರಾಜನ. ವಂಶೇ = ವಂಶದಲ್ಲಿ. ವ್ಯಜಾಯತ = ಹುಟ್ಟಿದರು. ತಸ್ಯ = ಆಶಂತನು ಚಕ್ರವರ್ತಿಗೆ, ಚಿತ್ರಾಂಗದ, ಅನುಜಃ = ಚಿತ್ರಾಂಗದಗೆ, ತಮ್ಮನಾದ ವಿಚಿತ್ರವೀರ್ಯಃ = ವಿಚಿತ್ರ ವೀರ್ಯನೆಂತೆಂಬುವ ಮಗನು. ಆಸೀತ್ = ಉದ್ಭವಿಸಿದನು ॥೯॥

ಧೃತೇತಿ॥ ತಸ್ಯ ವಿಚಿತ್ರವೀರ್ಯಸ್ಯ, ಧೃತರಾಷ್ಟ್ರಶ್ಚ, ಪಾಂಡುಶ್ಚೇತಿ ಪುತ್ರೌ, ಬಭೂವತುಃ। ಪಾಂಡೋಃ ಧರ್ಮೇಷು ಕೋವಿದೇ ಕುಶಲೇ ಕುಂತೀ ಚ, ಮಾದ್ರೀಚೇತಿ, ದ್ವೇ ಭಾರ್ಯೇ ಬಭೂವತುಃ॥೧೦॥

**ಧೃತರಾಷ್ಟ್ರಶ್ಚ ಪಾಂಡುಶ್ಚ ತಸ್ಯ ಪುತ್ರೌ ಬಭೂವತುಃ।**
**ಪಾಂಡೋಃ ಕುಂತೀ ಚ ಮಾದ್ರೀ ಚ ದ್ವೌಭಾರ್ಯೇ ಧರ್ಮ ಕೋವಿದೇ॥೧೦॥**

ಅರ್ಥ:- ತಸ್ಯ = ಆವಿಚಿತ್ರ ವೀರ್ಯರಾಜಗೆ ಧೃತರಾಷ್ಟ್ರಶ್ಚ = ಧೃತರಾಷ್ಟ್ರನೂ ಪಾಂಡುಶ್ಚ = ಪಾಂಡುರಾಜನೂ (ಇತಿ = ಹೀಗೆಂದು) ಪುತ್ರೌ = (ಇಬ್ಬರು) ಮಕ್ಕಳು ಬಭೂವತುಃ = ಹುಟ್ಟಿದರು. ಪಾಂಡೋಃ = ಪಾಂಡುರಾಜಗೆ. ಧರ್ಮ, ಕೋವಿದೇ = ಧರ್ಮಗಳಲ್ಲಿ, ಕುಶಲರಾದ ಕುಂತೀಚ = ಕುಂತಿಯೂನೂ. ಮಾದ್ರೀಚ = ಮಾದ್ರಿಯೂನೂ (ಇತಿ = ಹೀಗೆಂದು) ದ್ವೇ = ಇಬ್ಬರಾದ. ಭಾರ್ಯೇ = ಹೆಂಡಂದಿರು ಬಭೂವತುಃ = ಆದರು ॥೧೦॥

ಸ ಇತಿ॥ ಸ ಪಾಂಡುಃ, ಮುನೇಶ್ಶಾಪೇನ ಸ್ತ್ರೀ ಸಂಗ ಕಾಲೇಮಯಿ ಬಾಣ ಪ್ರಯೋಗಾತ್ತ್ವಂ ಸ್ತ್ರೀ ಸಂಗಂ ಕರಿಷ್ಯಸಿ ಚೇನ್ಮ್ರಿಯಸ್ವೇತ್ಯೇವಂ ರೂಪೇಣ ಸ್ತ್ರೀ ಸಂಗಮ ಜನ್ಯಂ ಸುಖಂ, ಜಹೌ ತತ್ಯಾಜ। ಓ ಹಾಕ್ ತ್ಯಾಗೇ-ಧಾ.ಸಕ.ಕರ್ತರಿ ಲಿಟ್.ಪರ.ಪ್ರ.ಏ। ಭರ್ತುಃಪಾಂಡೋಃ ರಾಜ್ಞಯಾ, ಕುಂತೀ ಧರ್ಮಾತ್ ಯಮಾತ್, ಯುಧಿಷ್ಠಿರಂ ತನ್ನಾಮಕಂ, ಸುತಮ್‌ಲೇಭೇ॥೧೧॥

**ಸ ಪಾಂಡುರ್ಮುನಿಶಾಪೇನ ಸ್ತ್ರೀ ಸಂಗಮಸುಖಂ ಜಹೌ।**
**ಭರ್ತ್ರಾಜ್ಞಯಾ ಸುತಂ ಕುಂತೀ ಧರ್ಮಾಲ್ಲೇಭೇ ಯುಧಿಷ್ಠಿರಮ್॥೧೧॥**

ಅರ್ಥ:- ಸಃ = ಅಂಥಾ ಪಾಂಡುಃ = ಪಾಂಡುರಾಜನು ಮುನಿ, ಶಾಪೇನ = ಋಷಿಯ, ಶಾಪದಿಂದ. ಸ್ತ್ರೀ, ಸಂಗಮ, ಸುಖಂ = ಸ್ತ್ರೀಯರ, ಸಂಭೋಗದಿಂದ (ಉಂಟಾಗುವ) ಸುಖವನ್ನು ಜಹೌ = ಬಿಟ್ಟನು (ಪಾಂಡುರಾಜನು ವನದಲ್ಲಿ ಪಕ್ಷಿರೂಪದಿಂದ ಕ್ರೀಡಿಸುತ್ತಿದ್ದ ಋಷಿ ದಂಪತಿಗಳ ಮೇಲೆ ಬಾಣ ಪ್ರಯೋಗ ಮಾಡಿ ಸ್ತ್ರೀ ಸಂಗ ಮಾಡಿದರೆ ನೀನು ಮೃತನಾಗುವಿಯೆಂತ ಶಾಪ ಪಡೆದನೆಂತ

ತಿಳಿಯತಕ್ಕುದು) ಭರ್ತೃ, ಆಜ್ಞಯಾ = ಪತಿಯಾದ ಪಾಂಡುರಾಜನ, ಅಪ್ಪಣೆಯಿಂದ, ಕುಂತೀ = ಕುಂತೀದೇವಿಯು ಯುಧಿಷ್ಠಿರ (ಧರ್ಮರಾಜ) ನೆಂತೆಂಬುವ ಸುತಂ = ಮಗನನ್ನು ಲೇಭೇ = ಹೊಂದಿದಳು ॥೧೧॥

ಧೃತರಾಷ್ಟ್ರಸ್ಯೇತಿ॥ ಧೃತರಾಷ್ಟ್ರಸ್ಯಸಕಾಶಾತ್, ಗಾಂಧಾರ್ಯಾಂ, ತದಾಖ್ಯಾಂ ಭಾರ್ಯಾಯಾಂ, ದುರ್ಯೋಧನಾದಯಃ ಶತಂ ಸುತಾಃ, ಆಸನ್। ತೇಷಾಂ, ವಧಾಯ, ಮಾರುತಃ ವಾಯುಃ, ಕುಂತ್ಯಾಂ ಭೀಮಂ ಅಜೀಜನತರ್ ಜನಯಾಮಾಸ॥೧೨॥

**ಧೃತರಾಷ್ಟ್ರಸ್ಯ ಗಾಂಧಾರ್ಯಾಮಾಸನ್ ದುರ್ಯೋಧನಾದಯಃ।**
**ವಧಾಯ ಮಾರುತ ಸ್ತೇಷಾಂ ಭೀಮಂ ಕುಂತ್ಯಾಮಜೀಜನತ್॥೧೨॥**

ಅರ್ಥ:- ಧೃತರಾಷ್ಟ್ರಸ್ಯ (ಸಕಾಶಾತ್) = ಧೃತರಾಷ್ಟ್ರ ರಾಜನ, ದೆಸೆಯಿಂದ ಗಾಂಧಾರ್ಯಾಂ = ಗಾಂಧಾರೀ ದೇವಿಯಲ್ಲಿ ದುರ್ಯೋಧನ, ಆದಯಃ = ದುರ್ಯೋಧನನೇ, ಮೊದಲಾಗಿವುಳ್ಳವರು (ನೂರುಮಕ್ಕಳು) ಆಸನ್ = ಹುಟ್ಟಿದರು. ತೇಷಾಂ = ಆ ದುರ್ಯೋಧನಾದಿಗಳ. ವಧಾಯ = ಸಂಹಾರಕ್ಕೋಸ್ಕರ ಮಾರುತಃ = ವಾಯುದೇವರು. ಕುಂತ್ಯಾಂ = ಕುಂತೀ ದೇವಿಯಲ್ಲಿ ಭೀಮಂ = ಭೀಮಸೇನ ನಾಮಕನಾದ ಮಗನನ್ನು ಅಜೀಜನತ್ = ಹುಟ್ಟಿಸಿದರು ॥೧೨॥

ಸೇತಿ॥ ಸಾ ಕುಂತೀ, ವಾಸವಾದಿಂದ್ರಾತ್, ಜಿಷ್ಣುಮರ್ಜುನಂ, ಲೇಭೇ। ಮಾದ್ರೀ ಪಾಂಡು ದ್ವಿತೀಯಭಾರ್ಯಾ, ದಸ್ರಯೋರಶ್ವಿನೋಸ್ಸಕಾಶಾತ್ ಯಮೌ ಯಮಳೌ ನಕುಲ ಸಹದೇವೌ, ಲೇಭೇ। ತೇ ವತ್ಸಾ ಬಾಲಕಾಃ ಪಾಂಡುನಾ, ಪರಿರಕ್ಷಿತಾಸ್ಸಂತಃ, ವನೇ, ಅವರ್ಧಂತ॥೧೩॥

**ಸಾಲೇಭೇವಾಸ ವಾಜ್ಜಿಷ್ಣುಂ ಯಮೌ ಮಾದ್ರೀ ಚ ದಸ್ರಯೋಃ।**
**ವನೇಽವರ್ಧಂತ ವತ್ಸಾ ಪಾಂಡುನಾಪರಿರಕ್ಷಿತಾಃ॥೧೩॥**

ಅರ್ಥ:- ಸಾ= ಆಕುಂತೀದೇವಿಯು ವಾಸವಾತ್ = ಇಂದ್ರದೇವರ ದಸೆಯಿಂದ ಜಿಷ್ಣುಂ = ಅರ್ಜುನ ನೆಂತೆಂಬುವ ಮಗನನ್ನು ಲೇಭೇ = ಹೊಂದಿದಳು. ಮಾದ್ರೀಚ = ಮಾದ್ರೀ ದೇವಿಯು ಕೂಡ ದಸ್ರಯೋಃ (ಸಕಾಶಾತ್) = ಅಶ್ವಿನೀ ದೇವತೆಗಳ ದೆಸೆಯಿಂದ ಯಮೌ = ಯಮಳರಾದ ನಕುಲ ಸಹದೇವರನ್ನು ಲೇಭೇ = ಹೊಂದಿದಳು. ತೇ = ಅಂಥಾ ವತ್ಸಾಃ = ಬಾಲಕರು ಪಾಂಡುನಾ = ಪಾಂಡುರಾಜನಿಂದ. ಪರಿರಕ್ಷಿತಾಃ (ಸಂತಃ) = ಸಂರಕ್ಷಣೆ ಮಾಡಿಸಿಕೊಳ್ಳಲ್ಪಟ್ಟವರಾಗಿ. ವನೇ = ಅರಣ್ಯದಲ್ಲಿ ಅವರ್ಧಂತ = ಅಭಿವೃದ್ಧರಾದರು. ॥೧೩॥

ಏವಮಿತಿ॥ ಏವಮಿತ್ಥಂ, ಮಹತ್ ಬಲಂ ಯೇಷಾಂತೇ, ಪಾಂಚಾಲಾದ್ರುಪ ದಾದಯಃ ಬಾಹ್ಲೀಕಾಶ್ಚ, ಅವರ್ಧಂತ। ಏವಂ ಪುರುವಂಶೋ ನಿರೂಪಿತಃ। ಅಧುನಾ ಯದುವಂಶಂ ನಿರೂಪಯತಿ-ಆಹುಕಾದಿತಿ॥ ಯಾದವಾದ್ಯದು ಕುಲೋತ್ಪನ್ನಾತ್, ಆಹುಕಾತ್ ತನ್ನಾಮ್ನಃ, ಉಗ್ರಸೇನಃ ದೇವಕಸ್ತಥಾ ದೇವಕಶ್ಚ, ಅಭೂತ್। ತಥಾಶ್ಶಬ್ದಸ್ಸಮುಚ್ಛಯೇ॥೧೪॥

**ಏವಂ ಪಾಂಚಾಲ ಬಾಹ್ಲೀಕಾ ಅವರ್ಧಂತ ಮಹಾಬಲಾಃ।**
**ಆಹುಕಾದ್ಯಾದವಾದುಗ್ರ ಸೇನೋ ಭೂದ್ದೇವಕಸ್ತಥಾ॥೧೪॥**

ಅರ್ಥ:- ಏವಂ = ಈ ರೀತಿಯಾಗಿ ಮಹಾ, ಬಲಾಃ = ಅಧಿಕವಾದ ಬಲವುಳ್ಳಂಥಾ. ಪಾಂಚಾಲ, ಬಾಹ್ಲೀಕಾಃ = ಪಾಂಚಾಲ ದೇಶಾಧಿಪತಿಗಳು, ಬಾಹ್ಲೀಕ ದೇಶಾಧಿಪತಿಗಳೂ ಕೂಡ ಅವರ್ಧಂತ = ಅಭಿವೃದ್ಧರಾದರು. ಇನ್ನು ಯದುವಂಶವನ್ನು ನಿರೂಪಿಸುತ್ತಾರೆ. - ಯಾದವಾತ್ = ಯದು ಕುಲೋತ್ಪನ್ನನಾದ ಆಹುಕಾತ್ = ಆಹುಕ ರಾಜನ ದೆಸೆಯಿಂದ ಉಗ್ರಸೇನಃ = ಉಗ್ರಸೇನ ರಾಜನು. ದೇವಕಸ್ತಥಾ = ದೇವಕ ರಾಜನೂ ಕೂಡ ಅಭೂತ್ = ಹುಟ್ಟಿದನು ॥೧೪॥

ದೇವಕಸ್ಯೇತಿ॥ ದೇವಕಸ್ಯರಾಜ್ಞಃ, ದೇವಸ್ಯ ಹರೇಸ್ಸಮ್ಮತಾ ಅವತಾರಾಯಾನುಮತಾ, ದೇವಕೀತನ್ನಾಮ್ನೀ, ಸುತಾ, ಜಜ್ಞೇ॥ ಶೂರಸ್ಯ ತನ್ನಾಮ್ನೋ ಯಾದವಸ್ಯನಂದನಃ, ಯಾದವಃ ಯದುಕುಲೋತ್ಪನ್ನಃ ವಸುದೇವಃ ಏನಾಂ ದೇವಕೀಂ ಉವಾಹ॥೧೫॥

**ದೇವಕಸ್ಯ ಸುತಾ ಜಜ್ಞೇ ದೇವಕೀ ದೇವಸಮ್ಮತಾ।**
**ವಸುದೇವ ಉವಾಹೈನಾಂ ಯಾದವಶ್ಶೂರನಂದನಃ॥೧೫॥**

ಶ್ರೀ ರಾಮಚಂದ್ರಾಯ ನಮಃ

## ಪಂಚಮ ಸರ್ಗ ಪ್ರಾರಂಭಃ

ವೇದಶಾಸ್ತ್ರ ಪ್ರವರ್ತನಾಯ ಕೃಷ್ಣಭೀಮಾಭ್ಯಾಮಾಜ್ಞಪ್ತಾನಾಂದುರ್ವಾಸಃ ಪ್ರಭೃತೀನಾಂ ಪ್ರವೃತ್ತಿಪ್ರಕಾರಃ, ತತೋ ನಾನಾ ವಿಧ ದುರ್ಮತ ವಿಜೃಂಭಣಂ, ತನ್ನಿರಾ ಸೇನ ಸಚ್ಛಾಸ್ತ್ರ ಸಂಪ್ರದಾಯ ಪ್ರವರ್ತನಾಯ ಶ್ರೀಹರ್ಯಾಜ್ಞಯಾಚ ವಾಯೋರವತಾರಶ್ಚೋತ್ತರ ಸರ್ಗ ಚತುಷ್ಟಯೇ ನಿರೂಪ್ಯತೇ – ತತಃ ಪರಮಹಂಸಾ ಇತ್ಯಾದಿನಾ। ತತಃ ಶ್ರೀಕೃಷ್ಣ ನಿರ್ದೇಶಾ ನಂತರಂ, ಯೇ, ಅತ್ರಿಜೋತ್ರಿ ಪುತ್ರೋ ದುರ್ವಾಸಾ ಆದ್ಯಾ ಯೇಷಾಂತೇ, ಪರಹಂಸಾ ಸ್ಸಂನ್ಯಾಸಿನಃ, ಕೃಷ್ಣಭೀಮಾಭ್ಯಾಮನುಶಿಕ್ಷಿತಾಃ ವೇದಶಾಸ್ತ್ರ ಸಂಪ್ರದಾಯ ಪ್ರವರ್ತನಾಯ ಆಜ್ಞಪ್ತಾಃ। ತೇ ಪರಮಹಂಸಾಃ, ವ್ಯಾಸಸ್ಯ ಭಗವಂತ ಆಶ್ರಯಾದಾಧಾರಾತ್, ವೇದಾಶ್ಚ ಶಾಸ್ತ್ರಾಣಿ ಚ ವೇದಶಾಸ್ತ್ರಾಣಿ, ಆವರ್ತಯನ್ ಪ್ರವರ್ತಿತವಂತಃ। ವೃತುವರ್ತನೇ – ಧಾ.ಣಿಜಂತ. ಕರ್ತರಿ. ಲಙ್. ಪರ. ಬ ॥೧॥

ವೇದ ಶಾಸ್ತ್ರ ಪ್ರವರ್ತನಾರ್ಥವಾಗಿ ಕೃಷ್ಣಭೀಮರಿಂದ ಆಜ್ಞಪ್ತರಾದ ದುರ್ವಾಸರು ಮೊದಲಾದವರ ಪ್ರವೃತ್ತಿ ಪ್ರಕಾರವು, ಅನಂತರದಲ್ಲಿ ನಾನಾವಿಧ ದುರ್ಮತಗಳ ಉದ್ರೇಕವು, ಆದುರ್ಮತಗಳನ್ನು ನಿರಾಕರಿಸಿ ಸಚ್ಛಾಸ್ತ್ರಸಂಪ್ರದಾಯ ಪ್ರವರ್ತನ ಮಾಡುವುದಕ್ಕೋಸ್ಕರ ಶ್ರೀ ಹರ್ಯಾಜ್ಞಾನುಸಾರವಾಗಿ ಶ್ರೀ ವಾಯ್ವವತಾರವು ಇವುಗಳು ಮುಂದಿನ ನಾಲ್ಕು ಸರ್ಗಗಳಲ್ಲಿ ನಿರೂಪಿಸಲ್ಪಡುತ್ತವೆ

**ತತಃ ಪರಮ ಹಂಸಾ ಯೇ ಕೃಷ್ಣಭೀಮಾನು ಶಿಕ್ಷಿತಾಃ।**
**ವ್ಯಾಸಾಶ್ರಯಾದತ್ರಿ ಜಾದ್ಯಾವೇದ ಶಾಸ್ತ್ರಾಣ್ಯ ವರ್ತಯನ್॥೧॥**

ಅರ್ಥ:– ತತಃ= ಕೃಷ್ಣಭೀಮಸೇನ ದೇವರುಗಳ ಆಜ್ಞಾನಂತರದಲ್ಲಿ ಯೇ=ಯಾವ ಅತ್ರಿಜ, ಆದ್ಯಾಃ=ಅತ್ರಿ ಪುತ್ರರಾದ ದೂರ್ವಾಸರು, ಮೊದಲಾಗಿ ಉಳ್ಳ ಪರಮಹಂಸಾಃ= ಈ ಹೆಸರುಳ್ಳ ಸಂನ್ಯಾಸಿಗಳು. ಕೃಷ್ಣ, ಭೀಮ ಅನುಶಿಕ್ಷಿತಾಃ= ಕೃಷ್ಣದೇವರು, ಭೀಮಸೇನದೇವರು– ಇವರುಗಳಿಂದ (ವೇದಶಾಸ್ತ್ರ ಪ್ರವರ್ತನಾರ್ಥವಾಗಿ)

ಆಜ್ಞಪ್ತರಾಗಿದ್ದರೋ. ತೇ= ಆ ದೂರ್ವಾಸರು ಮೊದಲಾದವರು. ವ್ಯಾಸ, ಆಶ್ರಯಾತ್=ವೇದವ್ಯಾಸದೇವರ, ಆಧಾರದ ದೆಸೆಯಿಂದ. ವೇದ, ಶಾಸ್ತ್ರಾಣಿ= ವೇದಗಳು, ಶಾಸ್ತ್ರಗಳು-ಇವುಗಳನ್ನು ಅವರ್ತಯನ್=ಪ್ರವರ್ತನ ಮಾಡಿದರು.

ಮಾಯಾವಾದ ಪ್ರವರ್ತಕಸ್ಯಸಂಕರಸ್ಯೋತ್ಪತ್ತಿಂ ವಕ್ತುಮುಪೋದ್ಘಾತ ಮಾರಚಯತಿ - ಕೃಷ್ಣ ಇತ್ಯಾದಿನಾ॥ ಕೃಷ್ಣೇಭೀಮೇ ಚ ವಿಷಯೇ, ಅಧಿಕ ಮತಿಶಯಂ ನವವಿಧಮಿತ್ಯರ್ಥಃ, ವಿ ದ್ವೇಷಂ, ದಧತಃ ಪೂರ್ವಂ ವಿದ್ಯಮಾನೇ ಮೇವ ಪೋಷಯಂತಃ, ಅಸುರಾಃ, ಕಲ್ಯಾದಿ ದೈತ್ಯಾಃ, ಭಗ್ನಂ ನಾಶಿತಂಬಾಹುಬಲಂ ಯೇಷಾಂತೇ ತಥೋಕ್ತಾಸ್ಸಂತಃ, ವಾಗ್ಭಿಃ ಪ್ರಹಾರಣೈರ್ಯುದ್ಧಾನಿ ವಾಗ್ಯುದ್ಧಾನಿ ಜಲ್ಪವಿತಂಡಾದಿಕಥಾರೂಪಾಣಿತೈಃ, ತತ್ವಸ್ಯ ವೇದಶಾಸ್ತ್ರ ಮುಖ್ಯಾರ್ಥಸ್ಯ ವಿಪ್ಲವ ಮುತ್ಪಾದನಂ, ಈಷು ರೀಪ್ಸಿತವಂತಃ । ಇಷು ಇಚ್ಛಾಯಾಂ-ಧಾ.ಅಕ.ಕರ್ತರಿಲಟ್. ಪರ. ಪ್ರ .ಬ । ಬಾಹು ಭ್ಯಾಂ ಕೃಷ್ಣ ಭೀಮ ಜಯಸ್ಯದುಷ್ಕರತ್ವಂ ಮನ್ಯಮಾನಾ ಅಸುರಾವಿ ಪ್ರತ್ವೇನಾವತೀರ್ಯ ವೇದಾದ್ಯಪಾರ್ಥಕಥನಾದಿನಾತದ ನಿಹಿತಮಚೀಕರ್ಷನ್ನಿತಿ ಭಾವಃ ॥೨॥

**ಕೃಷ್ಣೇ ಭೀಮೇ ಚ ವಿದ್ವೇಷಮಧಿಕಂ ದಧತೌಽಸುರಾಃ।**
**ಭಗ್ನ ಬಾಹುಬಲಾ ಈಷುರ್ವಾಗ್ಯುದ್ಧೈಸ್ತತ್ವ ವಿಪ್ಲವಮ್॥೨॥**

ಅರ್ಥ:- ಮಾಯಾವಾದ ಪ್ರವರ್ತಕನಾದ ಸಂಕರನ ಉತ್ಪತ್ತಿಯನ್ನು ಹೇಳಲು ಉಪೋದ್ಘಾತವನ್ನು ಹೇಳಲಾರಂಭಿಸುತ್ತಾರೆ. -ಕೃಷ್ಣೇ=ಕೃಷ್ಣದೇವರ ವಿಷಯದಲ್ಲಿ, ಭೀಮೇಚ=ಭೀಮಸೇನ ದೇವರ ವಿಷಯದಲ್ಲಿಯೂನೂ ಅಧಿಕಂ=ಹೆಚ್ಚಾದ ವಿದ್ವೇಷಂ=ವಿರೋಧವನ್ನು. ದಧತಃ=(ಪೂರ್ವದಲ್ಲಿದ್ದುದನ್ನೇ) ಪೋಷಿಸತಕ್ಕವರಾದ. ಅಸುರಾಃ=ಕಲ್ಯಾದಿ ದೈತ್ಯರು.ಭಗ್ನ, ಬಾಹು, ಬಲಾಃ(ಸಂತಃ)= ನಾಶಮಾಡಲ್ಪಟ್ಟ, ಭುಜಗಳ, ಪರಾಕ್ರಮವುಳ್ಳವರಾಗಿ, ವಾಕ್, ಯುದ್ಧೈಃ=ವಾಕ್ಕು (ಎಂಬ ಆಯುಧ)ಗಳಂದ (ಆಗತಕ್ಕ) ಯುದ್ಧಗಳಂದ (ಜಲ್ಪವಿತಂಡಾವಾದಗಳಂದ ಎಂತ ಭಾವ) ತತ್ವವಿಪ್ಲವಂ=ವೇದಶಾಸ್ತ್ರ ಮುಖ್ಯಾರ್ಥಕ್ಕೆ ನಾಶನವನ್ನು ಈಯುಃ=(ಮಾಡಲು) ಇಚ್ಛಿಸಿದರು.

ತಾ -ದೈಯತ್ಯರು ಬಾಹುಬಲದಿಂದ ಕೃಷ್ಣಭೀಮರನ್ನು ಜಯಿಸುವುದಶಕ್ಯವೆಂತ ತಿಳದು ಹೇಗಾದರೂ ಅವರಿಗೆ ಅನಿಷ್ಟವನ್ನಾಚರಿಸಬೇಕೆಂತ ಆಲೋಚಿಸಿ ವಾದಬಲದಿಂದ ವೇದಾದಿಗಳಿಗೆ ಅಪಾರ್ಥಪರ ವ್ಯಾಖ್ಯಾನವನ್ನು ಮಾಡಿ ತತ್ವ ವಿಪ್ಲವವನ್ನು ಮಾಡಲಿಚ್ಛಿಸಿದರು ॥೨॥

ರಹಇತಿ॥ ಬುದ್ಧಿಮಂತಃ ವಿಪರೀತ ಲಕ್ಷಣಯಾ ದುರ್ಬುದ್ಧಿಮಂತಃ, ಯದ್ವಾ 'ಅಬುದ್ಧಿಮಂತಃ' ಇತಿಚ್ಛೇದಃ । ವಿರುದ್ಧ ಬುದ್ಧಿಮಂತ ಇತ್ಯರ್ಥಃ, ನಞಾ್ ವಿರುದ್ಧಾರ್ಥತ್ವಾತ್ । ತೇ ಕೃಷ್ಣಭೀಮಯೋರನಿಷ್ಟಂ ಚಿಕೀರ್ಷಂತಃ, ಸರ್ವೇ ಸಮಸ್ತಾ ದೈತ್ಯಾಃ, ರಹಃ ಏಕಾಂತೇ, ಸಂಭೂಯಮಿಳಿತ್ವಾ, ಸ್ವೇಷಾಂ ಕಾರ್ಯಸ್ಯ ತತ್ವ ವಿಪ್ಲವ ಕರಣ ರೂಪಸ್ಯಸಿದ್ಧಯೇ, ಯಥಾಪ್ರಜ್ಞಾ ವಿಜೃಂಭಣಮ್, ಪ್ರಜ್ಞಾಯಾಂ ಬುದ್ಧೌ ವಿಜೃಂಭಣಂ ಪ್ರತಿಭಾಸಮನತಿಕ್ರಮ್ಯ, ಯಥಾಪ್ರಜ್ಞಾ ವಿಜೃಂಭಿತ ಮಿತಿ ಪಾಠೇ ಬುದ್ಧೌ ಪ್ರತಿಭಾತ ಮನತಿ ಕ್ರಮ್ಯೇತ್ಯರ್ಥಃ, ಸ್ವಚ್ಛಂದ ಮಿತಿಭಾವಃ । ಅನ್ಯೋನ್ಯಂ ಪರಸ್ಪರಂ, ನ್ಯಮಂತ್ರಯನ್ ಆಲೋಚಿತವಂತಃ । ಮಂತ್ರ ಶಬ್ದಾತ್ತತ್ಕ ರೋತೀತ್ಯರ್ಥೇಣಿಚಿ. ಲಙ್. ಪರ. ಪ್ರ. ಬ ॥೩॥

**ರಹಸ್ಸಂಭೂಯ ತೇ ಸರ್ವೇ ಬುದ್ಧಿಮಂತೋನ್ಯ ಮಂತ್ರಯನ್।**
**ಸ್ವ ಕಾರ್ಯಸಿದ್ಧಯೇ ಽನ್ಯೋನ್ಯಂ ಯಥಾ ಪ್ರಜ್ಞಾ ವಿಜೃಂಭಣಮ್॥೩॥**

ಅರ್ಥ:- ಬುದ್ಧಿಮಂತಃ=(ವಿಪರೀತಲಕ್ಷಣೆಯು) ದುರ್ಬುದ್ಧಿಮಂತರಾದ (ಅಥವಾ) ಅಬುದ್ಧಿಮಂತಃ=(ಎಂತ ಪದವಿಭಾಗ ಮಾಡುವ ಪಕ್ಷದಲ್ಲಿ) ವಿರುದ್ಧಬುದ್ಧಿವುಳ್ಳವರಾದ. ತೇ= ಪೂರ್ವೋಕ್ತರಾದ ಸರ್ವೇ= ಸಮಸ್ತರಾದ ದೈತ್ಯರು ರಹಃ= ಏಕಾಂತದಲ್ಲಿ, ಸಂಭೂಯ=ಮಿಳಿತರಾಗಿ, ಸ್ವ, ಕಾರ್ಯ, ಸಿದ್ಧಯೇ= ತಮ್ಮ (ವೇದವಿಪ್ಲವ ಸ್ವರೂಪವಾದ) ಕಾರ್ಯದ, ಸಿದ್ಧಿಗೋಸ್ಕರ. ಯಥಾ ಪ್ರಜ್ಞಾ ವಿಜೃಂಭಣಂ= ಬುದ್ಧಿಯಲ್ಲಿ ತೋರುವಿಕೆಯುನ್ನು ಅನುಸರಿಸಿ (ಸ್ವೇಚ್ಛಾನುಸಾರವಾಗಿ ಎಂತ ಭಾವ) ಅನ್ಯೋನ್ಯಂ=ಪರಸ್ಪರವಾಗಿ ನ್ಯಮಂತ್ರಯನ್= ಆಲೋಚಿಸಿದರು ॥೩॥

ತೇಷು ಮುಖ್ಯಾನಾಂ ಕೇಷಾಂಚಿನ್ನಾಮ ನಿರ್ದೇಶಪೂರ್ವಕಂ ತದ್ವಚನ ಪ್ರಕಾರ ಮಾಹ – ಶಕುನಿರಿತಿ॥ ದ್ವಾಪರೋ ದ್ವಾಪರ ಯುಗಾಭಿಮಾನೀ, ಶಕುನಿ ಸ್ತನ್ನಾಮಕ

ದೈತ್ಯಃ. ಲೋಕಾಯತಸ್ಯ ಚಾರ್ವಾಕಸ್ಯ ತನೂಜೇನ ಪುತ್ರೇಣ, ಚಾಣಕ್ಯೇನ ತದಾಖ್ಯೇನ ಸ್ವಸ್ಯತತ್ತ್ವತಯಾ ಸಮ್ಮತೇನಾರ್ಥೇನ ಕುನೀತಿಜ್ಞೇನ ಪ್ರಚೋದಿತಃ ಸಭಾಯಾಂ ಭಾಷಣಾಯ ಪ್ರೇರಿತಸ್ಸನ್,ತತ್ತ್ವಾರ್ಥೇನ ಬೃಂಹಿತಂ ಪೂರ್ಣ, ವಚಃ, ಆಹಾಸ್ಮ ಉವಾಚ ಬ್ರೂಞ್‌ವ್ಯಕ್ತಾಯಾಂವಾಚಿ – ಧಾ.ಸಕ ಕರ್ತರಿಲಟ್. ಪರ. ಪ್ರ.ವ.। ಸೂ। 'ಲಟ್‌ಸ್ಮೇ' ಇತಿಸ್ಮ ಯೋಗಾದತೀತಾರ್ಥತ್ವಂ ಲಟಃ । ಸೂ । 'ಬ್ರೂವಃ ಪಂಚಾ ನಾಮಾದಿತ ಆಹೋಬ್ರುವಃ' ಇತಿಲತ್ಯಾಹಾದೇಶಃ । ತತ್ತ್ವಾರ್ಥ ಬೃಂಹಿತ ಮಿತಿ ಪಾಠೇ ತತ್ರ ತೇಷು ಮಧ್ಯೇ ಅರ್ಥ ಪೂರ್ಣಂ ವಚಃ ಆಹಸ್ಮೇತ್ಯರ್ಥಃ ॥೪॥

**ಶಕುನಿರ್ದ್ವಾಪರ ಸ್ಮಾಹ ವಚಸ್ತತ್ವಾರ್ಥ ಬೃಂಹಿತಮ್।**
**ಲೋಕಾಯತ ತನೂಜೇನ ಚಾಣಿಕ್ಯೇನ ಪ್ರಚೋದಿತಃ ॥೪॥**

ಅವರಲ್ಲಿ ಮುಖ್ಯರಾದ ಕೆಲವರ ಹೆಸರನ್ನು ಹೇಳುತ್ತಾ ಅವರ ಮಾತುಗಳನ್ನು ಹೇಳುತ್ತಾರೆ– ದ್ವಾಪರಃ=ದ್ವಾಪರ ಯುಗಾಭಿಮಾನಿಯಾದ. ಶಕುನಿಃ= ಶಕುನಿ ನಾಮಕ ದೈತ್ಯನು. ಲೋಕಾಯತ, ತನೂಜೇನ= ಚಾರ್ವಾಕನ, ಮಗನಾದ. ಚಾಣಕ್ಯೇನ= (ದುರ್ನೀತಿಜ್ಞನಾದ) ಚಾಣಿಕ್ಯನಿಂದ. ಪ್ರಚೋದಿತಃ (ಸನ್) =(ಸಭೆಯಲ್ಲಿ ಮಾತನಾಡಲು) ಪ್ರೇರಿತನಾಗಿ. ತತ್ವಾರ್ಥ ಬೃಂಹಿತಮ್=(ತನಗೆ) ತತ್ತ್ವವಾಗಿ ಸಮ್ಮತವಾದ ಅರ್ಥದಿಂದ ಪೂರ್ಣವಾದ ವಚಃ= ವಾಕ್ಯವನ್ನು ಆಹಸ್ಮ= ನುಡಿದನು ॥೪॥

ವಚನಪ್ರಕಾರ ಮಾಹ– ದುರ್ಧರ್ಷ ಇತಿ॥ ಭೀಮಸೇನಃ, ನಃ ಅಸ್ಮಾಭಿಃ ಕರ್ತರಿಷಷ್ಠೀ । ದುರ್ಧರ್ಷಃ ದರ್ಷಯಿತು ಮಶಕ್ಯಃ । ಕೃಷ್ಣೋಪಿಅತ್ಯಂತಂ ದುಸ್ಸಹಸ್ಸೋಢುಮಶಕ್ಯಃ । ತಾಭ್ಯಾಂ ಕೃಷ್ಣಭೀಮಾಭ್ಯಾಂ ನಿರೀ ಕ್ಷಿತಾಃ ಸಕ್ರೋಧ ಮವಲೋಕಿತಾಃ, ದೈತ್ಯಾ ಅಸ್ಮದಾದ್ಯಾಃ, ಮೃತ್ಯುಂ ಮರಣಂ ಯಾಂತಿಯಾಸ್ಯಂತಿ । ಯಾಪ್ರಾಪಣೇ – ಧಾ. ಲಟ್. ಪರ. ಪು. ಬ. । ಮೃತೇರ್ನಿಶ್ಚಿತತಯಾ ವರ್ತಮಾನ ಸಾಮೀಪ್ಯದ್ವರ್ತಮಾನವದ್ವ್ಯಪದೇಶಃ । ತತ್ರ, ಸಂಶಯಸ್ಸಂದೇಹಃ, ನಾಸ್ತಿ ॥೫॥

**ದುರ್ಧರ್ಷೋ ಭೀಮಸೇನೋನಃ ಕೃಷ್ಣೋಪ್ಯತ್ಯಂತ ದುಃಸಹಃ।**
**ತಾಭ್ಯಾಂ ನಿರೀಕ್ಷಿತಾ ದೈತ್ಯಾಮೃತ್ಯುಂಯಾಂತಿ ನ ಸಂಶಯಃ ॥೫॥**

ಅರ್ಥ:- ವಚನ ಪ್ರಕಾರವನ್ನು ಹೇಳುತ್ತಾರೆ- ಭೀಮಸೇನಃ= ಭೀಮಸೇನ ದೇವರು ನಃ=ನಮಗೆ(ನಮ್ಮಿಂದ ಎಂತ ತೃತೀಯಾರ್ಥದಲ್ಲಿ ಷಷ್ಠಿಯು) ದುರ್ಧರ್ಷಃ= ಧರ್ಷಸಲಶಕ್ಯರು ಕೃಷ್ಣೋಽಪಿ= ಕೃಷ್ಣ ದೇವರೂನೂ. ಅತ್ಯಂತ, ದುಃಸ್ಸಹಃ= ಅತ್ಯಂತವಾಗಿ ಸಹಿಸಲಶಕ್ಯನು. ತಾಭ್ಯಾಂ=ಆ ಉಭಯರಿಂದ ನಿರೀಕ್ಷಿತಾಃ=(ಕ್ರೋಧದಿಂದ) ನೋಡಲ್ಪಟ್ಟಂಥಾ ದೈತ್ಯಾಃ= ಅಸ್ಮದಾದಿ ದೈತ್ಯರು ಮೃತ್ಯುಂ= ಮರಣವನ್ನು ಯಾಂತಿ= ಹೊಂದುತ್ತಾರೆ. ಸಂಶಯಃ=(ಈ ವಿಷಯದಲ್ಲಿ) ಸಂದೇಹವು. ನ=ಇಲ್ಲ ॥೫॥

ಕೃಷ್ಣಇತಿ॥ ಕೃಷ್ಣಃ, ದೈವಂ ದೇವತಾ ಸ್ವಾಮಿತಯಾ ಭಜನೀಯ ಇತ್ಯರ್ಥಃ। ಭೀಮಃ, ಗುರು ಸ್ತತ್ತ್ವೋಪದೇಶಕಃ । ಪಾರ್ಷತೀ ದ್ರೌಪದೀಚ, ವೇದವಿದ್ಯಾತದಭಿಮಾನಿನೀ । ತಸ್ಯಾಃ ದ್ರೌಪದ್ಯಭಿಮನ್ಯಮಾನ ವೇದವಿದ್ಯಾಯಾ ಉತ್ಸಾದನೇನ ಅಪವ್ಯಾಖ್ಯಾನ ಪೂರ್ವಕಂ ತಾತ್ಪರ್ಯಾರ್ಥ ಪ್ರತ್ಯಾವನೇನೈವ ತೌ ಕೃಷ್ಣಭೀಮೌ, ಅತಿಸಂಕಟಂ ಅಧಿಕ ಕ್ಲೇಶಂ, ಯಾತಃ ಪ್ರಾಪ್ನುತಃ । ಪ್ರಮಾಣಾ ಭಾವೇನ ಜನಾನಾಂ ಸ್ವಮಹಾತ್ಮ್ಯ ಜ್ಞಾನ ದೌರ್ಲಭ್ಯೇ ನಾರಾಧನ ಲೋಪಾತ್ಕೃಷ್ಣಸ್ಯ, ವೇದಸ್ಯ ತತ್ತ್ವಜ್ಞಾನ ಜನನ ಶಕ್ತಿ ಕುಂಠನೇ ಸತಿ ತತ್ತ್ವಜ್ಞಾನಾರ್ಥಂ ವೇದಾಧ್ಯಯನ ಕಾಮಜನಾಭಾವೇನೋಪ ದೇಶ್ಯಾಭಾವಾತ್ಸ್ವ ಸ್ಯೋಽಪ ದೇಷ್ಟೃತಾ ಲೋಪಾದ್ಭೀಮಸ್ಯಚ ಸಂಕಟಂ ಭವತೀತಿ ಭಾವಃ ॥೬॥

**ಕೃಷ್ಣೋ ದೈವಂ ಗುರುರ್ಭೀಮೋ ವೇದ ವಿದ್ಯಾ ಚ ಪಾರ್ಷತೀ।**
**ತಸ್ಯಾ ಉತ್ಸಾದನೇ ನೈವ ಯಾತಸ್ತಾವತಿ ಸಂಕಡಮ್ ॥೬॥**

ಅರ್ಥ:- ಕೃಷ್ಣಃ= ಕೃಷ್ಣದೇವರು. ದೈವಂ= ದೇವತೆಯು (ಸರ್ವರಿಂದ ಭಜನೀಯನೆಂತ ಭಾವ) ಭೀಮಃ= ಭೀಮಸೇನದೇವರು. ಗುರುಃ= ಗುರುವು. ಪಾರ್ಷತಿ ಚ= (ಪೃಷತ ಪುತ್ರನಾದ ದ್ರುಪದನ ಮಗಳಾದ) ದ್ರೌಪದೀ ದೇವಿಯಾದರೋ ವೇದವಿದ್ಯಾ= ವೇದ ವಿದ್ಯಾಭಿಮಾನಿಯು ತಸ್ಯಾಃ= ಆ(ದ್ರೌಪದ್ಯಭಿಮನ್ಯಮಾನವಾದ) ವೇದವಿದ್ಯೆಯ ಉತ್ಸಾದ ನೇನೈವ = (ಅಪವಾಖ್ಯಾನ ಮಾಡಿ) ತಾತ್ಪರ್ಯಾರ್ಥವನ್ನು ಕೆಡಿಸುವುದರಿಂದಲೇ ತೌ = ಆಕೃಷ್ಣಭೀಮರು ಅತಿ ಸಂಕಟಂ = ಅತ್ಯಂತ ವ್ಯಸನವನ್ನು ಯಾತಃ = ಹೊಂದುತ್ತಾರೆ. ತಾ. -

ಪ್ರಮಾಣವಿಲ್ಲದ ಕಾರಣದಿಂದ ಜನರಿಗೆ ತಮ್ಮ ಮಹಾತ್ಮ್ಯ ತಿಳಿಸಲವಕಾಶವಿಲ್ಲದೆ ತಮ್ಮ ಪೂಜೆಯು ಲೋಪಿಸುವುದರಿಂದ ಕೃಷ್ಣದೇವರಿಗೆ, ವೇದದ ತತ್ವಜ್ಞಾನ ಜನನ ಶಕ್ತಿಯು ಕುಂಠಿತವಾದ ಕಾರಣದಿಂದ ತತ್ವಜ್ಞಾನಕ್ಕೋಸ್ಕರ ವೇದಾಧ್ಯಯನವನ್ನು ಅಪೇಕ್ಷಿಸುವ ಪುರುಷರಿಲ್ಲದೆ ತಮ್ಮ ಗುರುತ್ವವು ಲೋಪಿಸುವುದರಿಂದ ಭೀಮಸೇನ ದೇವರಿಗೂ ಸಂಕಟವಧಿಕವಾಗಿ ಉಂಟಾಗುತ್ತದಂತೆ ಭಾವ ॥೬॥

ತಸ್ಮಾದಿತಿ॥ ತಸ್ಮಾತ್ ವೇದೋತ್ಸಾದನೇನ ಕೃಷ್ಣಭೀಮಯೋಃ ಸಂಕಟ ಜನನ ರೂಪಾತ್ಕಾರಣಾತ್, ಕೈಶ್ಚಿತ್ ಅಸ್ಮಾಸು ಸಮರ್ಥೈಃ, ಭುವಿ ಭೂಮೌ ಉತ್ಪದ್ಯ ಜನಿತ್ವಾ, ವೇದಸ್ಯ, ವ್ಯಾಖ್ಯಾನೇನ ಸಮ್ಯಗರ್ಥ ವರ್ಣನೇನ ಶಾಲಿಷು ವಿದ್ವತ್ಸು ಪಂಡಿತೇಷು, ಜನೇಷು, ಪ್ರವಿಶ್ಯ, ವಿದ್ಯಾ, ಉತ್ಸಾದ್ಯ ತಾಮ್ । ಷದಲ್ಪವಿಶರಣ ಗತ್ಯವ ಸಾದನೇಷು – ಧಾ. ಕರ್ಮಣಿ ಲೋಟ್. ಆತ್ಮ. ಪ್ರ. ಏ. ॥೭॥

**ತಸ್ಮಾಜ್ಜನೇಷು ವಿದ್ವತ್ಸು ವೇದವ್ಯಾಖ್ಯಾನ ಶಾಲಿಷು ।**
**ಪ್ರವಿಶ್ಯೋತ್ಸಾದ್ಯತಾಂ ವಿದ್ಯಾಕೈಶ್ಚಿದುತ್ಪದ್ಯ ಭೂತಲೇ ॥೭॥**

ಅರ್ಥ:- ತಸ್ಮಾತ್ = ಆ (ವೇದವಿಪ್ಲಾವನದಿಂದ ಕೃಷ್ಣಭೀಮರಿಗೆ ಸಂಕಟ ಉಂಟಾಗುವ) ಕಾರಣದದೆ ಸೆಯಿಂದ ಕೈಶ್ಚಿತ್ = (ನಮ್ಮಲ್ಲಿ ಸಮರ್ಥರಾದ) ಕೆಲವರಿಂದ. ಭೂತಲೇ = ಭೂ ಪ್ರದೇಶದಲ್ಲಿ. ಉತ್ಪದ್ಯ = ಜನಿಸಿ, ವೇದ, ವ್ಯಾಖ್ಯಾನ, ಶಾಲಿಷು = ವೇದದ, ಯಥಾಸ್ಥಿತಾರ್ಥ ವ್ಯಾಖ್ಯಾನದಿಂದ, ಒಪ್ಪುತ್ತಿರುವ ವಿದ್ವತ್ಸು = ಪಂಡಿತರಾದ. ಜನೇಷು = ಜನರಲ್ಲಿ. ಪ್ರವಿಶ್ಯ = ಪ್ರವೇಶಮಾಡಿ ವಿದ್ಯಾ = ವೇದವಿದ್ಯೆಯು ಉತ್ಸಾದ್ಯತಾಂ = ನಾಶಮಾಡಲ್ಪಡಲಿ ॥೭॥

ವಿಪರೀತಾ ನೀತಿ॥ ಅಪಿಕಿಂಚ, ವಿಪರೀತಾನಿ ವಿಪರೀತಾರ್ಥ ಪ್ರತ್ರಿಪಾದಕಾನಿ, ಬಹೂನ್ಯನೇಕಾನಿ, ಶಾಸ್ತ್ರಾಣಿ, ಕರ್ತವ್ಯಾನಿ । ವಿಪರೀತ ಶಾಸ್ತ್ರಾಣಿ ಚ ಪಾರ್ವತೀಂ ಪ್ರತಿ ರುದ್ರೋಕ್ತಾನಿ ಪಾದ್ಮೇ ಉತ್ತರಖಂಡೇ ದ್ವಿಚತಾರಿಂಶೇಽಧ್ಯಾಯೇ – "ರುದ್ರ ಉವಾಚ ॥ ಶ್ರುಣು ದೇವಿ ಪ್ರವಕ್ಷ್ಯಾಮಿ ತಾಮಸಾನಿ ಯಥಾ ಕ್ರಮಾತ್ । ಯೇಷಾಂ ಶ್ರವಣ ಮಾತ್ರೇಣ ಪಾತಿತ್ಯಂ ಜ್ಞಾನಿ ನಾಮಪಿ । ಪ್ರಥಮಂ ಹಿಮಯ್ಯೈವೋಕ್ತಂ ಶೈವಂ ಪಾಶುಪತಾದಿಕಮ್ । ಮಚ್ಛಕ್ತ್ಯಾ ವೇಶಿಶಿತ್ತೈರ್ವಿಪ್ರೈ ಸ್ಸಂಪ್ರೋಕ್ತಾನಿ ತತಃ ಪರಮ್। ಕಣಾದೇನತು ಸಂಪ್ರೋಕ್ತಂ ಶಾಸ್ತ್ರಂ ವೈಶೀಷಿಕಂ ಮಹತ್। ಗೌತಮೇನ

ತಥಾ ನ್ಯಾಯಂ ಸಾಂಖ್ಯಂತ ತ್ಕಪಿಲೇನ ವೈ। ಧೀಷಣೇನ ತಥಾಪ್ರೋಕ್ತಂ ಚಾರ್ವಕಮತಿ ಗೂಹಿತಮ್। ದೈತ್ಯಾನಾಂ ನಾಶ ನಾರ್ಥಾಯ ಹರಿಣಾಬುದ್ಧ ರೂಪಿಣಾ। ಬೌದ್ಧಶಾಸ್ತ್ರ ಮಸತ್ಪ್ರೋಕ್ತಂ ನಗ್ನನೀಲ ಪಟಾದಿಕಮ್ । ಮಾಯಾವಾದಮ ಸಚ್ಛಾ'ಸ್ತ್ರ'ಂ ಪ್ರಚ್ಛನ್ನಂ ಬೌದ್ಧಮುಚ್ಯತೇ। ಮಯ್ಯೈವ ಕಥಿತಂ ದೇವಿ ಕಲೌ ಬ್ರಾಹ್ಮಣ ರೂಪಿಣಾ। ಮಣಿಮಾನ್ನಿಹತಃ ಪೂರ್ವಂ ಭೀಮೇನಶುಭ ಬುದ್ಧಿನಾ॥ ಸಂಜಾತೋ ಬ್ರಾಹ್ಮಣ ಕುಲೇ ತಪಸಾ ಮಾಂಪ್ರ ಸಾದ್ಯವೈ। ಮಿಥ್ಯಾವಾದ ಮಸಚ್ಛಾಸ್ತ್ರಂ ಚಕಾರ ಸತು ಸಂಕರಃ" ಇತ್ಯಾರಭ್ಯ, "ಶಾಸ್ತ್ರಾಣೀ ಮಾನಿ ಗಿರಿಜೇ ತಾಮಸಾನಿ ನಿಬೋಧಮೇ" ಇತ್ಯಂತೇನ॥ ಅಸತ್ತರ್ಕೈಃ ವ್ಯಾಪ್ತಾದಿಗುಣ ರಹಿತೈಃ ಪ್ರಮಾಣ ಬಾಧಾದಿ ದೋಷಯುಕ್ತೈ ಶ್ಚಾನುಮಾನೈಃ, ಸತ್ತರ್ಕೈ ರ್ವ್ಯಾಪ್ತ್ಯಾದಿ ಗುಣಯುಕ್ತೈಃ 'ವೇದೋಪ್ರಮಾಣಂ ನಿರರ್ಥಕತ್ವಾತ್ ಕಚಟತ ಪಾದಿವತ್ ಅಸಂಗತ ತ್ವಾಜ್ಜರದ್ಗವಾದಿ ವಾಕ್ಯವತ್' ಇತ್ಯಾದ್ಯನುಮಾನಶ್ಚ, ವೇದ ವಿದ್ಯಾ, ನಿರಸ್ಯತಾ ಮುತ್ಸಾದ್ಯತಾಮ್। ಅಸುಕ್ಷೇಪಣೇ – ಧಾ. ಕರ್ಮಣಿ ಲೋಟ್ ॥೮॥

**ವಿಪರೀತಾನಿ ಶಾಸ್ತ್ರಾಣಿ ಕರ್ತವ್ಯಾನಿ ಬಹೂನ್ಯಪಿ।**
**ಅಸತ್ತರ್ಕೈ ಶ್ಚ ಸತ್ತರ್ಕೈ ರ್ವೇದವಿದ್ಯಾನಿರಸ್ಯತಾಮ್ ॥೮॥**

ಅರ್ಥ:– ಅಪಿ = ಮತ್ತು ವಿಪರೀತಾನಿ = ವಿರುದ್ಧಾರ್ಥ ಪ್ರತಿ ಪಾದಕಗಳಾದಂಥಾ ಬಹೂನಿ = ಅನೇಕಗಳಾದ. ಶಾಸ್ತ್ರಾಣಿ = ಶಾಸ್ತ್ರಗಳು. ಕರ್ತವ್ಯಾನಿ = ಮಾಡಲ್ಪಡತಕ್ಕವು. ಅಸತ್, ತರ್ಕೈಃ = (ವ್ಯಾಪ್ತ್ಯಾದಿ ರಹಿತವಾದ ಕಾರಣದಿಂದ) ದುಷ್ಟಗಳಾದ, ದೂಷಣಾನುಮಾ ನಗಳಿಂದ, ಸತ್ ತರ್ಕೈಶ್ಚ = ಸಮಿಚೀನ ವ್ಯಾಪ್ತ್ಯಾದಿಯುಕ್ತ) ಗಳಾದ ದೂಷಣಾನುಮಾನ ಗಳಿಂದೂನು. ವೇದವಿದ್ಯಾ=ವೇದವಿದ್ಯೆಯು. ನಿರಸ್ಯತಾಂ = ನಾಶಮಾಡಲ್ಪಡಲಿ ॥೮॥

ವೇದೇತಿ॥ ಕಾರ್ಯಾಂತರಂ ಕೃಷ್ಣಭೀಮ ಕ್ಲೇಶೋತ್ಪಾದನ ರೂಪಂ ಸ್ಪೃಹಯ ನ್ತೀತಿ ತಥೋಕ್ತಾನಾಂ, ಕಾರ್ಯಾಂತರ ಸ್ಪೃಶಾಮಿತಿ ಪಾಠೇ ಕಾರ್ಯಾಂತರಂ ಸ್ಪೃಶಂತಿ ಅಂಗೀಕುರ್ವಂತೀತಿ ತಾದೃಶಾನಾಮಿತ್ಯರ್ಥಃ। ನೋಽಸ್ಮಾಕಂ, ವೇದಾಶ್ಚ ಶಾಸ್ತ್ರಾಣಿಚ ತೇಷಾಂ ಸಮಾಹಾರೋ ವೇದಶಾಸ್ತ್ರಂ ತಸ್ಮಾತ್ತತ್ಪರಿತ್ಯಾಗಾದಿತ್ಯರ್ಥಃ, ಭೀತಿ ರ್ನಾಸ್ತಿಕತಾ ಪ್ರಾಪ್ತಿರೂಪಾ, ನಾಸ್ತಿ। ವೇದ ವಿಪ್ಲಾವನಾಯ ಚಾರ್ವಾಕ ಶಾಸ್ತ್ರೇಣೈವಾಲಂಕಿ ಮನೇನಾಮಭಿನವ ಮಾರ್ಗಾನ್ವೇಷಣೇನೇತ್ಯತ ಆಹ – ಲೋಕಾಯತೇತಿ ॥ ಜನೈರಾಸ್ತಿಕೈಃ, ಲೋಕಾಯ ತಸ್ಯಚಾರ್ವಾಕಸ್ಯಮತಂ, ಮಾನ್ಯೈಃ ಪ್ರತ್ಯಕ್ಷಾತಿರಿಕ್ತ ವೇದಾದಿ ಪ್ರಮಾಣ್ಯೈರ್ಹೀನಂ, ವೇದಾದಿ ವಿರುದ್ಧಾರ್ಥ ಪ್ರತಿಪಾದಕ

ಮಿತ್ಯರ್ಥಃ, ಇತ್ಯತೋಹೇತೋಃ ನಾದ್ರಿಯತೇ ನಾಂಗ್ರೀ ಕ್ರೀಯತೇ। ದೃಙ್ ಆದರಣೇ – ಧಾ. ಕರ್ಮಣಿಲಟ್. ಆತ್ಮ. ಪ್ರ, ಏ.। ನಾದ್ರಿಯತೇ ಜನ ಇತಿ ಪಾಠೇ ಜನ ಆಸ್ತಿಕ ಲೋಕಃ ಲೋಕಾಯತ ಮತಂ ವಾದ್ರಿಯತೇನ ವಿಶ್ವಸಿಕಿತೀತಿ ವ್ಯಾಖ್ಯೇಯಮ್। ತದಾ ಕರ್ತರ್ಯೇವ ಲಟ್ ॥೯॥

**ವೇದ ಶಾಸ್ತ್ರಾನ್ನನೋ ಭೀತಿರಸ್ತಿ ಕಾರ್ಯಾಂತರ ಸ್ಪೃಹಮ್ ।**
**ಲೋಕಾಯತ ಮತಂ ಮಾನಹೀನಂ ನಾ ದ್ರಿಯತೇ ಜನ್ಯೈಃ ॥೯॥**

ಅರ್ಥ:- ಕಾರ್ಯಾಂತರ, ಸ್ಪೃಹಂ = ಕೃಷ್ಣಭೀಮರಿಗೆ ಸಂಕಟೋತ್ಪಾದನ ರೂಪವಾದ ಮತ್ತೊಂದು ಕಾರ್ಯವನ್ನು, ಅಪೇಕ್ಷಿಸುತ್ತಿರುವಂಥಾ. ನಃ=ನಮ್ಮಗಳಿಗೆ ವೇದ, ಶಾಸ್ತ್ರಾತ್ = ವೇದಗಳು, ಶಾಸ್ತ್ರಗಳು – ಇವುಗಳ ಸಮೂಹದ ದೆಸೆಯಿಂದ (ಇವುಗಳ ಪರಿತ್ಯಾಗದ ದೆಸೆಯಿಂದ ವೆಂತಭಾವ) ಭೀತಿಃ = (ನಾಸ್ತಿಕತ್ವಪ್ರಾಪ್ತಿ ರೂಪವಾದ) ಭಯವು ನಾಸ್ತಿ = ಇಲ್ಲ. ಚಾರ್ವಾಕ ಶಾಸ್ತ್ರದಿಂದ ವೇದವಿಪ್ಲಾವನವು ಜರುಗಬಹುದೆಂದರೆ ಹೇಳುತ್ತಾರೆ – ಜನ್ಯೈಃ = ಆಸ್ತಿಕಜನರಿಂದ ಲೋಕಾಯತ, ಮತಂ = ಚಾರ್ವಾಕನ, ಮತವು, ಮಾನ, ಹೀನಂ = (ಪ್ರತ್ಯಕ್ಷಾತಿರಿಕ್ತವಾದ) ವೇದಾದಿ ಪ್ರಮಾಣಗಳಿಂದ, ರಹಿತವು (ಇತಿ=ಈ ಕಾರಣದ ದೆಸೆಯಿಂದ) ನಾದ್ರಿಯತೇ = ಆದರಿಸಲ್ಪಡುವುದಿಲ್ಲ ॥೯॥

ಏವಂ ತರ್ಹಿ ಜನ ವಿಶ್ವಾಸನೀಯೈ ರಕ್ಷಪಾದಾದಿ ಸಮಯೈರಿಷ್ಟಸ್ಸಿದ್ಧಿ ಸ್ಸ್ಯಾದಿತ್ಯಾಶಂಕ್ಯಾಹ – ಅಕ್ಷಪಾದ ಇತಿ॥ ಅಕ್ಷಪಾದ ಸ್ತನ್ನಾಮಾ ಕಶ್ಚಿಚ್ಛಾಸ್ತ್ರ ಪ್ರಣೇತಾ, ಕಣಾದೋ ವೈಶೇಷಿಕ ಸಮಯ ಪ್ರವರ್ತಕಃ, ಅಪರೋನಾರಾಯಣಾ ವತಾರಾತ್ಕಪಿಲಾದನ್ಯಃ, ಜಡ ಸ್ತತ್ವಜ್ಞಾನ ರಹಿತಃ, ಕಪಿಲಸ್ತನ್ನಾಮಕ ದೈತ್ಯಶ್ಚೇತ್ಯೇತೇ ಶಾಸ್ತ್ರಾಂತರಾಣಿ ಭಿನ್ನಭಿನ್ನ ಶಾಸ್ತ್ರಾಣಿ, ಕೃತ್ವಾಪಿ, ವೇದ ದ್ವೇಷಂ ವೇದೇ ಕಂಠತೋಽ ಪ್ರಾಮಾಣ್ಯ ಕಥನ ರೂಪಂವಿರೋಧಂ, ಸ ಕುರ್ವತೇ ನಾಚರಂತಿ। ಅತೋನ ತೈರಿಷ್ಟಸಿದ್ಧಿ ಪ್ರತ್ಯಾಶೇತಿ ಭಾವಃ। ಡುಕೃಞ್ ಕರಣೇ – ಧಾ. ಕರ್ತರಿಲಟ್. ಪರ. ಪ್ರ. ಬ.॥ 'ಕಪಿಲಶ್ಚಾಪರೋ ಜನಃ' ಇತಿಪಾಠೇ ಅಪರೋಜನಃ ಸ್ಫೋಟ ಬ್ರಹ್ಮತ್ವವಾದಿ ಪಾಣಿನ್ಯಾದಿರಿತ್ಯರ್ಥಃ ॥೧೦॥

**ಅಕ್ಷಪಾದಃ ಕಣಾದಶ್ಚ ಕಪಿಲ ಶ್ಚಾಪರೋ ಜಡಃ ।**
**ಶಾಸ್ತ್ರಾಂತರಾಣಿ ಕೃತ್ವಾಪಿ ವೇದದ್ವೇಷಂ ನ ಕುರ್ವತೇ ॥೧೦॥**

ಅರ್ಥ:- ಅಕ್ಷಪಾದಾದಿ ಶಾಸ್ತ್ರದಿಂದ ಕೂಡ ವೇದವಿಪ್ಲಾವನ ಸಿದ್ಧಿಯಾಗುವುದಿಲ್ಲವೆಂತ ಹೇಳುತ್ತಾರೆ – ಅಕ್ಷಪಾದಃ = (ನ್ಯಾಯಸೂತ್ರಕಾರನಾದ) ಗೌತಮನು ಕಣಾದಶ್ಚ = ವೈಶೇಷಿಕ ಶಾಸ್ತ್ರ ಪ್ರವರ್ತಕನಾದ) ಕಣಾದನೂನು ಅಪರಃ = (ನಾರಾಯಣಾವತಾರರಾದ ಕಪಿಲ ದೇವರದೆಸೆಯಿಂದ) ಭಿನ್ನನಾದ. ಜಡಃ = ತತ್ವಜ್ಞಾನ ರಹಿತನಾದ. ಕಪಿಲಶ್ಚ = ಕಪಿಲನಾಮಕ ದೈತ್ಯನೂನು (ಇತ್ಯೇತೇ = ಹೀಗೆಂತೆಂಬುವರೆಲ್ಲರು) ಶಾಸ್ತ್ರಾಂತರಾಣಿ = ಬೇರೆಬೇರೆ ಶಾಸ್ತ್ರಗಳನ್ನು ಕೃತ್ವಾಪಿ = ಮಾಡಿಯೂ ಕೂಡ. ವೇದ, ದ್ವೇಷಂ = ವೇದದಲ್ಲಿ (ಸ್ಪಷ್ಟವಾಗಿ ಅಪ್ರಮಾಣ್ಯ ಕಥನರೂಪವಾದ) ವಿರೋಧವನ್ನು ನಕುರ್ವತೇ = ಮಾಡುವುದಿಲ್ಲ. ಈ ಕಾರಣದಿಂದ ಆಶಾಸ್ತ್ರಗಳಿಂದು ನಮ್ಮ ಕಾರ್ಯವು ಸಿದ್ಧಿಸುವುದಿಲ್ಲವೆಂತಭಾವ ॥೧೦॥

ಸ್ಫುಟವೇದಾ ಪ್ರಾಮಾಣ್ಯವಾದಿ ಬೌದ್ಧ ಶಾಸ್ತ್ರೇಣಾ ಪೀಷ್ಟ ಸಿದ್ಧಿ ಪ್ರತ್ಯಾಶಾನಾಸ್ತಿತ್ಯಾಹ – ಹರೇಣೇತ್ಯಾದಿಭಿಸ್ತ್ರಿಭಿಃ॥ ಪೂರ್ವಂ, ಹರೇಣ, ರುದ್ರೇಣ ನಿಹಿತಾಃ ತ್ರೈಪುರಾಃ ರೌಪ್ಯಾಯಸಹಿರಣ್ಮಯ ಭೇದೇನ ತ್ರಯಾಣಾಂ ಪುರಾಣಾಂ ಸಂಬಂಧಿನಸ್ತತ್ರ ವಸಂತ ಇತ್ಯರ್ಥಃ, ಅಸುರಾಃ, ಪುನಃ, ಜಾತಾಃ ಭುವ್ಯತ್ವನ್ನಾಸ್ಸಂತಃ, ಸಂಸರ್ಗ ನ್ಯಾಸ್ತಿಕ ಜನ ಸಂಬಂಧಸ್ಯ ದೋಷೇಣ ಪಾಮರಾ ಅಸುರೇಷು ಹೀನತಯಾ ಸಂಭಾವನೀಯಾ ಸ್ಸಂತಃ ತ್ರಯೀಂ ವೇದಂ, ಶ್ರದ್ಧದುಃ ಪ್ರಮಾಣ ತ್ವೇನಾದೃತ ವಂತಃ। ಡುಧಾಞ್ ಧಾರಣ ಪೋಷಣಾಯೋಃ – ಧಾ.ಪಕ. ಕರ್ತರಿ ಲಿಟ್. ಪರ. ಪ್ರ.ಬ. ॥೧೧॥

**ಹರೇಣ ನಿಹಿತಾಃ ಪೂರ್ವಂ ತ್ರೈ ಪುರಾಅಸುರಾಃ ಪುನಃ ।**
**ಜಾತಾಃ ಸಂಸರ್ಗದೋಷೇಣ ಪಾಮರಾಃ ಶದ್ಧಧು ಸ್ತ್ರಯೀಮ್ ॥೧೧॥**

ಅರ್ಥ:- ಸ್ಪಷ್ಟವಾಗಿ ವೇದ ವಿರುದ್ಧವಾಗಿರುವ ಬೌದ್ಧಶಾಸ್ತ್ರದಿಂದೂ ಪ್ರಕೃತ ಕಾರ್ಯಸಿದ್ಧಿಯಾಗುವುದಿಲ್ಲವೆಂತ ಹೇಳುತ್ತಾರೆ – ಪೂರ್ವಂ = ಪೂರ್ವದಲ್ಲಿ ಹರೇಣ = ರುದ್ರದೇವರಿಂದ ನಿಹಿತಾಃ = ಸಂಹರಿಸಲ್ಪಟ್ಟಂಥಾ ತ್ರೈಪುರಾಃ = (ಭಂಗಾರ, ಬೆಳ್ಳಿ, ಉಕ್ಕುಗಳಿಂದ ನಿರ್ಮಿತಗಳಾದ) ಮೂರು ಪಟ್ಟಣಗಳ ಸಂಬಂಧಿಗಳಾದ ಅಸುರಾಃ = ದೈತ್ಯರು ಪುನಃ = ಮತ್ತು ಜಾತಾಃ (ಸಂತಃ) = (ಭೂಮಿಯಲ್ಲಿ) ಉದ್ಭವಿಸಿದವರಾಗಿ ಸಂಸರ್ಗ, ದೋಷಣ = (ಆಸ್ತಿಕ ಜನರ) ಸಹವಾಸದ, ದೋಷದಿಂದ ಪಾಮರಾಃ (ಸಂತಃ) = (ಅಸುರರಲ್ಲಿ) ನೀಚರು (ಎಂತ ಭಾವಿಸಲರ್ಹರು) ಆಗಿ ತ್ರಯೀಂ = ವೇದವನ್ನು ಶ್ರದ್ಧ ದುಃ = (ಪ್ರಮಾಣ ವೆಂತ) ವಿಶ್ವಾಸ ಮಾಡಿದರು ॥೧೧॥

ಬುದ್ಧಸ್ತನ್ನಾಮಕ ರೂಪ ಧಾರೀಹರಿಃ, ವೇದಃ, ಅಪ್ರಮಾಣಂ ಅಯತಾರ್ಥ ಜ್ಞಾನಜನಕಃ, ಇತ್ಯೇವಂ. ಉಕ್ತ್ವಾ ಅನೃತತತ್ವ ವ್ಯಾಘಾತ ನೈರರ್ಥಕ್ಯಸಿದ್ಧಾರ್ಥ ಬೋಧಕ ತ್ವಾದಿ ಹೇತುಭಿರುಪ ಪಾದ್ಯ, ತಾನ್ ತ್ರೈಪುರಾ ಸುರಾನ್, ವ್ಯಮೋಹಯತ್ ಬಾಲ್ಯಏವ ಸ್ವೀಯ ಜಾತಕರ್ಮಾದಿ ಸಂಸ್ಕಾರ ಕಾಲೇ ದೀಯಮಾನಾ ಹುತಿ ಗ್ರಹಣಾಯಾಗತಾನಾಂ ರುದ್ರಾದಿ ಸರ್ವ ದೇವಾನಾ ಮಾಯುಧ ನಿಗರಣಾದ್ಯ ಶಕ್ಯ ಕಾರ್ಯಕರಣಾದಿನಾ ಸ್ವಮಾಹಾತ್ಮ್ಯಂ ಪ್ರದರ್ಶ್ಯ ಬಾಲೇ ನಾಪಿ ಸ್ವೇನೇರಿತಽರ್ಥೇ ವಿಶ್ವಾಸಮುತ್ಪಾದ್ಯ ಮೋಹಿತಾಂಶ್ಚಕಾರ। ಹಿಪ್ರಸಿದ್ಧ ಮಿದಮ್। ತತೋಽ ನಂತರಂ, ತೇ. ಪರಂ ಆಪಾತತಃ ಪ್ರತೀಯಮಾನಾದನ್ಯಂ ದೇವಾದಿ ವೇದ್ಯತ್ವೇನ ಶ್ರೇಷ್ಠಂಚ, ತಸ್ಯ ಬುದ್ಧಾವತಾರಸ್ಯ ಹರೇರ್ಮತಂ ಶೂನ್ಯಾದಿಶಬ್ದಾನಾಂ "ಶಮೂನಂ ಕುರುತೇ ಯಸ್ಮಾತ್" ಇತ್ಯಾದ್ಯ ವಿರುದ್ಧಾರ್ಥ ಸದ್ಭಾವರೂಪಂ, ಅಜ್ಞಾತ್ವಾ, ಬೌದ್ಧ ಶಾಸ್ತ್ರಂ ಆಪಾತತೋ ಬುದ್ಧೋಕ್ತ ಮಾರ್ಗಾನುಸಾರಿತ್ವಾತ್ತಥಾ ವ್ಯವ ಹ್ರಿಯ ಮಾಣ ಶಾಸ್ತ್ರಂ, ತೇನು ವಿಸ್ತಾರಿತ ವಂತಃ। ತನು ವಿಸ್ತಾರೇ - ಧಾ. ಆಟ್. ಪರ. ಪ್ರ. ಬ. ॥೧೨॥

**ವೇದೋಽಪ್ರಮಾಣ ಮಿತ್ಯು ಕ್ತ್ವಾ ಬುದ್ಧಸ್ತಾನ್ವಿವ್ಯಮೋಹಯತ್।**
**ಬೌದ್ಧಶಾಸ್ತ್ರಂ ತತಸ್ತೇನುರಜ್ಞಾತ್ವಾ ತನ್ಮತಂ ಪರಂ ॥೧೨॥**

ಅರ್ಥ:- ಬುದ್ಧಃ = ಬುದ್ಧನಾಮಕನಾದ ಹರಿಯು ವೇದಃ = ವೇದವು ಅಪ್ರಮಾಣಂ = ಅಯಥಾರ್ಥಜ್ಞಾನಜನಕವು ಇತಿ = ಹೀಗೆಂತೆಂದು ಉಕ್ತ್ವಾ = (ಅನೃತತತ್ವವ್ಯಾಹತ-ತ್ವಾದಿ ಮಾತುಗಳಿಂದ) ಉಪ ಪಾದಿಸಿ ತಾನ್ = ಆತ್ರಿಪುರಾಸುರರನ್ನು ವ್ಯಮೋಹಯತ್ = (ಕೂಸಾಗಿರುವ ತಮ್ಮ ಜಾತಕರ್ಮಾದಿ ಸಂಸ್ಕಾರಗಳು ಜರುಗುವ ಕಾಲದಲ್ಲಿ ಆಹುತಿಗಳನ್ನು ತೆಗೆದುಕೊಳ್ಳಲು ಬಂದಿದ್ದ ರುದ್ರಾದಿ ದೇವತೆಗಳೇ ವಾದವನ್ನು ಕೇಳಿ ಕುಪಿತರಾಗಿ ಪ್ರಯೋಗಿಸಿದ ಆಯುಧಗಳನ್ನೆಲ್ಲ ನುಂಗೋಣ ಮೊದಲಾದ ಅಶಕ್ಯ ಕಾರ್ಯಗಳನ್ನು ಮಾಡುವುದರಿಂದ ತಮ್ಮ ಮಹಾತ್ಮ್ಯವನ್ನು ಪ್ರದರ್ಶನ ಮಾಡಿ ತಮ್ಮ ಮಾತಿನಲ್ಲಿ ವಿಶ್ವಾಸ ಹುಟ್ಟಿಸಿ) ಮೋಹಪಡಿಸಿದರು. ಹಿ= (ಇದು) ಪ್ರಸಿದ್ಧವು । ತತಃ = ಅನಂತರದಲ್ಲಿ (ತೇ = ಆ ದೈತ್ಯರು) ಪರಂ = (ವಿಮರ್ಶೆ ಮಾಡದವರಿಗೆ ತೋರುವುದಕಿಂತಲು) ಭಿನ್ನವು - ಮತ್ತು (ದೇವತೆಗಳು ಮೊದಲಾದ ಯೋಗ್ಯರು ತಿಳಿದುಕೊಳ್ಳಲು ಅರ್ಹವಾದ ಕಾರಣದಿಂದ) ಉತ್ತಮವೂ ಆದ ತತ್, ಮತಂ = ಆ ಬುದ್ಧ ದೇವರ (ಶೂನ್ಯಾದಿ ಶಬ್ದಗಳಿಗೆ ಅರ್ಥಾಂತರ

ಸದ್ಭಾವ ರೂಪವಾದ) ಸಿದ್ಧಾಂತವನ್ನು ಅಜ್ಞಾ, ತ್ವಾ = ಅರಿಯದೆ ಬೌದ್ಧಶಾಸ್ತ್ರಂ = (ಆಪಾತದಿಂದ ಬುದ್ಧೋಕ್ತಮಾರ್ಗವಾಗಿ ತೋರುವ ಮಾರ್ಗವನ್ನವಲಂಬಿಸಿದ ಕಾರಣದಿಂದ) ಬುದ್ಧ ಸಂಬಂಧಿಯಾದ ಶಾಸ್ತ್ರವನ್ನು ತೇನುಃ = ವಿಸ್ತಾರಮಾಡಿದರು ||೧೨||

ಬ್ರಹ್ಮವೇದಂ ಹರಿಂ ವಾ ಅಣಂತಿ ಜಾನಂತೀತಿ ಬ್ರಾಹ್ಮಣಾಃ ಆಸ್ತಿಕಾ ಇತ್ಯರ್ಥಃ, ಪೃಷಾದರಾದಿತ್ವಾದ್ವರ್ಣ ವ್ಯತ್ಯಯಃ। ಯದ್ವಾ- ಬ್ರಾಹ್ಮಣಾಃ ಬ್ರಾಹ್ಮಣಾದಯಃ ಸರ್ವೇಽಪಿ ವೇದ ಪ್ರಾಮಾಣ್ಯಭ್ಯುಪಗಂತಾರಃ ||ಸೂ|| ಕಡಾರಾಃ ಕರ್ಮಧಾರಯ ಇತ್ಯತ್ರೇವ ಬಹುವಚನ ಮಾದ್ಯರ್ಥೇ। ನಿರ್ಗತಾ ಆಶ್ರಮೇಭ್ಯಃ ಬ್ರಹ್ಮಚರ್ಯಾದಿ ಭ್ಯೋ ನಿರಾಶ್ರ ಮಾಸ್ತಾನ್, ದುರಾಚಾರಾನ್ ನಗ್ನನೀಲಪಟ ಧಾರಣಾದಿಗರ್ಹಿತಾಚಾರ ಯುಕ್ತಾನ್, ಶ್ರುತಿಃ ವೇದಾನ್ ಪ್ರತ್ಯಕ್ಷಂ ಸ್ಫುಟಂ, ದ್ವಿಷತಃ ಅಪ್ರಮಾಣತಯಾ ಭ್ಯುಪಗಚ್ಛತಃ, ವೇದ ಬಾಹ್ಯಾನ್ ವೇದಾನಧಿಕಾರಿಣಃ, ನವಿದ್ಯತೇಕೌಶಲಂ ಸಮಯೋಚಿತಾಚಾರ ಚಾತುರ್ಯಂ ಯೇಷಾಸ್ತಾನ್, ಏತಾನ್ ದೈತ್ಯಸ್ವರೂಪಾನ್ ಬೌದ್ಧಾನ್, ಗರ್ಹಯಂತಿ ನಿಂದಂತಿ। ಗರ್ಹಕುತ್ಸಾಯಾಮ್- ಧಾ. ಸಕ. ಕರ್ತರಿ ಲಟ್. ಪರ. ಪ್ರ. ಬ. ||೧೩||

**ನಿರಾಶ್ರಮಾನ್ ದುರಾಚಾರಾನ್ಪ್ರ ತ್ಯಕ್ಷಂ ದ್ವಿಷತಶ್ಶ್ರು ತೀಃ ।**
**ಬ್ರಾಹ್ಮಣಾಗರ್ಹಯನ್ತ್ಯೇ ತಾ ನ್ವೇದ ಬಾಹ್ಯಾನ ಕೌಶಲಾನ್ ||೧೩||**

ಅರ್ಥ:- ಬ್ರಾಹ್ಮ ಣಾಃ = ವೇದವನ್ನು (ಅಥವಾ) ಹರಿಯನ್ನು ತಿಳಿದ ಜನರು (ಅಥವಾ) ಬ್ರಾಹ್ಮಣಾದಿಗಳು (ಬಹುವಚನವು ಆದ್ಯರ್ಥದಲ್ಲಿ. ಆಸ್ತಿಕರು ಸರ್ವರೆಂತ ಭಾವ) ನಿರಾಶ್ರಮಾನ್ = ಬ್ರಹ್ಮಚಾರ್ಯಾದ್ಯಾಶ್ರಮರಹಿತರಾದಂಥಾ ದುರ್, ಆಚಾರಾನ್ = ದುಷ್ಟಗಳಾದ, (ನಗ್ನರಾಗಿಯು ಕರಿವಸ್ತ್ರವುಟ್ಟವರಾಗಿಯು ಇರೋಣ ಮೊದಲಾದ) ಆಚಾರಗಳುಳ್ಳಂಥಾ ಪ್ರತ್ಯಕ್ಷಂ = (ಯಥಾ ಭವತಿತಥಾ) = ಸ್ಪಷ್ಟವಾಗೋಣ ಹೇಗೋ ಹಾಗೆ ಶ್ರುತೀಃ = ವೇದಗಳನ್ನು ದ್ವಿಷತಃ = ದ್ವೇಷಮಾಡುವಂಥಾ || (ಅಪ್ರಮಾಣ ವೆಂತ ಹೇಳುವರೆಂತ ಭಾವ) ವೇದ, ಬಾಹ್ಯಾನ್ = ವೇದಕ್ಕೆ ಅನಧಿಕಾರಿಗಳಾದ ಅಕೌಶಲಾನ್ = (ಸಮಯೋಚಿತ ಕಾರ್ಯಕರಣದಲ್ಲಿ) ಚಾತುರ್ಯವಿಲ್ಲದವರಾದ ಏತಾನ್ = ಈ ಬೌದ್ಧರನ್ನು ಗರ್ಹಯಂತಿ = ನಿಂದಿಸುತ್ತಾರೆ ||೧೩||

ಜೈನಾದಿ ಮತಾನ್ಯಪ್ಯೇವಮೇವೇತ್ಯಾಹ - ಜೈನೇತಿ॥ ಜೈನಾಃ ಜಿನೋಕ್ತ ತತ್ತ್ವಾಭ್ಯುಪಗಂತಾರ ಆರ್ಹತಾಃ ಪಾಶುಪತಾಃ ಪಶುಪತೇಶ್ಶೈವ ಸ್ವಭಕ್ತಾಃ ಶೈವ ಪಾಶುಪತ ಕಾಲಾ ಮುಖ ಮಹಾಪ್ರಭ ಭೇದೇನ ಚತುರ್ವಿಧಾಶ್ಚ ಆದ್ಯಾ ಯೇಷಾಂತೇ ವಾದಿ ನಶ್ಚ, ನ ಕೇವಲಂ ಬೌದ್ಧಾ ಇತಿ ಚಾರ್ಥಃ। ಲೋಕಾನಾಂ ವೈದಿಕ ಜನಾನಾಂ ವಿದ್ವೇಷಸ್ಯ ಗೋಚರಾಃ ವಿಷಯಾಃ। ಕುತ ಏವ ಮತ ಉಕ್ತಂ -ವೇದೇತಿ। ಏತೇಜನಾದ್ಯಾಃ ವೇದವಿ ದ್ವೇಷಿಣೋಽಪಿ ಶುತಿವಿರೋಧಿನೋಽಪಿ, ತತ್ರವೇದ ವಿರೋಧಕರಣೇ, ಉಪಾಯಂ, ನಜಾನತೇ ನಜಾನಂತಿ। ಜ್ಞಾಅವಬೋಧನೆ - ಧಾ. ಸಕ. ಕರ್ತರಿ ಲಟ್. ಆತ್ಮ. ಪ್ರ. ಬ. ॥೧೪॥

**ಜೈನ ಪಾಶುಪತಾದ್ಯಾಶ್ಚ ಲೋಕ ವಿ ದ್ವೇಷ ಗೋಚರಾಃ ।**
**ವೇದವಿದ್ವೇಷಿಣೋ ಪ್ಯೇತೇ ತತ್ರೋಪಾಯಂ ನ ಜಾನತೇ ॥೧೪॥**

ಅರ್ಥ:- ಜೈನಾದಿ ಮತಗಳು ಕೂಡ ಹೀಗೆಯೇ ಇರುತ್ತವೆ ಎಂದು ಹೇಳುತ್ತಾರೆ.- ಜೈನ, ಪಾಶುಪತ, ಆದ್ಯಾಶ್ಚ - ಜಿನೋಕ್ತಮಾರ್ಗಾವಲಂಬಿಗಳಾದ ಆರ್ಹತರು ರುದ್ರ ಶೇಷ್ಠ ತ್ವವಾದಿಗಳು - ಇವರುಗಳೇ ಮೊದಲಾಗಿ ಉಳ್ಳವರು ಕೂಡ ಲೋಕ, ವಿದ್ವೇಷ, ಗೋಚರಾಃ = ಆಸ್ತಿಕ ಜನರ, ವಿರೋಧಕ್ಕೆ, ಪಾತ್ರರಾಗಿಧಾರೆ। ಏತೇ = ಈ ಜೈನಾದಿಗಳು ವೇದ, ವಿದ್ವೇಷಿಣೋಽಪಿ = ವೇದದಲ್ಲಿ ದ್ವೇಷವುಳ್ಳವರಾದರೂನು ತತ್ರ = ಆವೇ ದವಿರೋಧಾಚರಣದಲ್ಲಿ ಉಪಾಯಂ = ಯುಕ್ತಿಯನ್ನು ನ ಜಾನತೇ = ಅರಿಯರು ॥೧೪॥

ಅಧುನಾ ಸ್ವಾಭಿಮತ ಮುಪಾಯ ಮಾಹ- ಸರ್ವಾನಿತ್ಯಾದಿನಾ ॥ ಅಸ್ಮಾನ್ವೇಕಃ ದ್ವಿಜೋ ಬ್ರಾಹ್ಮಣಃ, ಭೂತ್ವಾ, ಪರಮ ಮುತ್ತಮಂ, ಆಶ್ರಮಂ ಯತ್ಯಾಶ್ರಮಂ ಶ್ರಿತಸ್ಸನ್, ವೇದಾಂತೀತಿ ವ್ಯಪ ದೇಶೇನ ವ್ಯವಹಾರೇಣ, ಇತ್ಥಂ ಭೂತಲಕ್ಷಣೇ ತೃತೀಯಾ। ಸರ್ವಾನ್ ವೇದಾನ್, ನಿರಸ್ಯನ್ ಅಭಿಮತಾರ್ಥ ಪ್ರಚ್ಯಾವನೇನ ನಿರಾಕುರ್ವಾಣಃ ಪುರುಷಃ, ನಃ ಅಸ್ಮಾಕಂ, ಪರ ಉತ್ತಮಃ, ಸುಹೃತ್ ಪ್ರಿಯಃ। ವೇದಪ್ರಾಮಾಣ್ಯಾ ಭ್ಯುಪಗಂತೃ ವೇಷೇಣೈವ ವೇದ ವಿಪ್ಲಾವನೇ ಕೃತೇ ನಾಸ್ಮಾಕಂ ಲೋಕ ವಿದ್ವೇಷ ಗೋಚರತಾ ಭವತೀತ್ಯಯ ಮೇವ ಮುಖ್ಯ ಉಪಾಯ ಇತಿ ಭಾವಃ ॥೧೫।

**ಸರ್ವಾನ್ ವೇದಾನ್ ದ್ವಿಜೋಭೂತ್ವಾ ಶ್ರಿತಃ ಪರಮ ಮಾಶ್ರಮಮ್।**
**ವೇದಾಂತಿ ವ್ಯಪದೇಶೇನ ನಿರಸ್ಯನ್ನಃ ಪರಃ ಸುಹೃತ್ ॥೧೫॥**

ಅರ್ಥ:- ಈಗ ತನಗೆ ಸಮ್ಮತವಾದ ಉಪಾಯವನ್ನು ಹೇಳುತ್ತಾನೆ - ದ್ವಿಜಃ (ನಮ್ಮಲ್ಲಿ ಒಬ್ಬನು ಭೂಮಿಯಲ್ಲಿ) ಬ್ರಾಹ್ಮಣನಾಗಿ ಭೂತ್ವಾ = ಹುಟ್ಟಿ ಪರಮಂ = ಉತ್ತಮವಾದ ಆಶ್ರಮಂ = ಯತ್ಯಾಶ್ರಮವನ್ನು ಶ್ರಿತಃ / ಸನ್) = ಅವಲಂಬಿಸಿದವನಾಗಿ ವೇದಾಂತಿ, ವ್ಯಪದೇಶೇನ = ವೇದಾಂತಿ ಎಂತ ವ್ಯವಹಾರದಿಂದ ಸರ್ವಾನ್ = ಸಮಸ್ತಗಳಾದ ವೇದಾನ್ = ವೇದಗಳನ್ನು ನಿರಸ್ಯನ್ = (ಅಭಿಮತಾರ್ಥವನ್ನು ಬಿಡಿಸುವುದರಿಂದ ಕೆಡಿಸುವಂಥಾ ಪುರುಷನು ನಃ = ನಮಗೆ ಪರಃ = ಉತ್ತಮನಾದ ಸುಹೃತ್ = ಸ್ನೇಹಿತನು. ಇಂತಹಾ ಪುರುಷ ನೀಗ ನಮಗಾವಶ್ಯಕನೆಂತ ಭಾವ.

ಪ್ರಕೃತಕಾರ್ಯ ಕುಶಲಂ ಶ್ರುಂಗಿ ಗ್ರಾಹಿಕಯಾ ದರ್ಶಯತಿ - ಅಸ್ಮಿನ್ನಿತಿ॥ ಅಯಂಯಃ ಪುರಾ ಭೀಮಸೇನ ಸಂಹೃತ ತ್ವಾತ್ ಸ್ವತ ಏವ ಭೀಮ ದ್ವೇಷಯುಕ್ತಃ ಸ ಇತ್ಯರ್ಥಃ, ಮಣಿಮಾನ್ ತನ್ನಾಮಕೋ ದೈತ್ಯ ಏವ, ನಾನ್ಯ ಏತಾದೃಶ ಇತ್ಯೇವಕಾರಾರ್ಥಃ। ಅಸ್ಮಿನ್ ಪ್ರಕೃತೇ ವೇದ ವಿಪ್ಲಾವನ ರೂಪೇ, ಕಾರ್ಯೇ ವಿದಗ್ಧಃ ಕುಶಲಃ, ದೃಶ್ಯತೇ ಮಯೇತಿಶೇಷಃ। ದೃಶಿರ್ ಪ್ರೇಕ್ಷಣೇ-ಧಾ. ಕರ್ಮಣಿಲಟ್। 'ಮಣಿಮಾನೇವಕ್ಷ್ಯತೇ' ಇತಿ ಪಾಠೇಲಕ್ಷ್ಯತೇ ಪ್ರಕೃತಕಾರ್ಯಕರಣೋಪಯೋಗಿ ಲಕ್ಷಣವತ್ತಯಾ ಜ್ಞಾಯತ ಇತ್ಯರ್ಥಃ। ಅಯಂ ಮಣಿಮಾನ್ ಅಮುನಾ, ರಾಜ್ಞಾ, ಕಲಿನಾ, ಕಾರ್ಯ ಸ್ಯ ವೇದವಿ ಪ್ಲಾವನ ರೂಪಸ್ಯ ಸಿದ್ಧಯೇ ಆ ದೇಷ್ಟವ್ಯಃ ಅಜ್ಞಾಪಿತ ವ್ಯಃ। ಸ್ವತ ಏವ ಭೀಮ ಪ್ರತೀಕಾರ ಮಿಚ್ಛಿನ್ನಯ ಮಾಜ್ಞಾಪಿತಸ್ಯ ಶ್ಚೇತ್ಕಾರ್ಯಂ ಶೀಘ್ರಂ ಸೇತ್ಸ್ಯತೀತಿಭಾವಃ ॥೧೬॥

**ಅಸ್ಮಿನ್ ಕಾರ್ಯೇ ವಿದಗ್ಧೋಽಯಂ ಮಣಿಮಾನೇವದೃಶ್ಯತೇ ।**
**ಆದೇಷ್ಟ ವ್ಯೋಽ ಮುನಾರಾಜ್ಞಾ ಕಲಿನಾ ಕಾರ್ಯಸಿದ್ಧಯೇ ॥೧೬॥**

ಅರ್ಥ:- ಪ್ರಕೃತ ಕಾರ್ಯ ಕರಣದಲ್ಲಿ ಕುಶಲನಾದ ಪುರುಷನನ್ನು ಸ್ಪಷ್ಟವಾಗಿ ಹೇಳುತ್ತಾನೆ - ಅಯಂ = ಈ (ಭೀಮಸೇನನ ದೆಸೆಯಿಂದ ಪೂರ್ವದಲ್ಲಿ ಹತನಾಗಿದ್ದ ಪ್ರಯುಕ್ತ ತಾನಾಗಿಯೇ ಭೀಮ ದ್ವೇಷಿಯಾದವನೆಂತ ಭಾವ) ಮಣಿಮಾನೇವ = ಮಣಿಮಂತ ನೇವೇ ಅಸ್ಮಿನ್ - ಈ (ವೇದವಿಪ್ಲಾವನರೂಪವಾದ) ಕಾರ್ಯೇ - ಕೆಲಸದಲ್ಲಿ ವಿದಗ್ಧಃ = ಕುಶಲ ನಾಗಿ. (ಮಯಾ = ನನ್ನಿಂದ) ದೃಶ್ಯತೇ = ಕಾಣಲ್ಪಡುತ್ತಾನೆ. ಅಯಂ = ಈ ಮಣಿಮಂತನು ಅಮುನಾ = ಇಂತಹ. ರಾಜ್ಞಾ = (ನಮಗೆ) ಅರಸನಾದ ಕಲಿನಾ = ಕಲಿಯಿಂದ ಕಾರ್ಯ, ಸಿದ್ಧಯೇ = ವೇದವಿಪ್ಲಾವನ ರೂಪ ಕಾರ್ಯದ ಸಿದ್ಧಿಗೋಸ್ಕರ ಆದೇ ಷ್ಟವ್ಯಃ = ಆಜ್ಞಾಪಿಸಲರ್ಹನು.

ತಾನಾಗಿ ಯೇಭೀಮಸೇನ ದೇವರಿಗೆ ವಿರೋಧವನ್ನು ಸಾಧಿಸಬೇಕೆಂತ ಇಚ್ಛಸುವ ನಾದ ಈ ಮಣಿಮಂತನನ್ನಾ ಜ್ಞಾಪಿಸಿದ ಪಕ್ಷದಲ್ಲಿ ಪ್ರಕೃತ ಕಾರ್ಯವು ಶೀಘ್ರದಲ್ಲಿ ಸಿದ್ಧಿಸಬಹುದೆಂತ ಭಾವ ॥೧೬॥

ಏವಮಿತಿ॥ ಏವಮುಕ್ತ ಪ್ರಕಾರೇಣ, ದ್ವಾಪರೇಣ ಶುಕನಿನಾ, ಉಕ್ತಾಃ, ಕಲಿಃ ಪೂರ್ವಾ ಏಷಾಂತೇ, ಸುರದ್ವಿಷಾ ದೈತ್ಯಾಃ, ಹೃಷ್ಟಾ ಸಂತುಷ್ಟಾಸ್ಸಂತಃ, ಮಣಿಮಂತಂ, ಆಹೂಯ ಆಕಾರ್ಯ, ಸಂಭಾವ್ಯ ಮಾನಯಿತ್ವಾ ಬಭಾಷಿರೇ ಜಗದುಃ। ಭಾಷವ್ಯಕ್ತಾಯಾಂವಾಚಿ – ಧಾ.ಸಕ. ಕರ್ತರಿ ಲಿಟ್. ಆತ್ಮ. ಪ್ರ. ಬ. ॥೧೭॥

**ಏವ ಮುಕ್ತಾ ದ್ವಾಪರೇಣ ಕಲಿಪೂರ್ವಾಃ ಸುರದ್ವಿಷಃ ।**
**ಹೃಷ್ಟಾಆಹೂಯ ಸಂಭಾವ್ಯಮಣಿಮಂತಂಬಭಾಷಿರೇ ॥೧೭॥**

ಅರ್ಥ:- ಏವಂ = ಈ ಪ್ರಕಾರವಾಗಿ ದ್ವಾಪರೇಣ = ದ್ವಾಪರ ಯುಗಾಭಿಮಾನಿಯಾದಶಕುನಿಯಿಂದ ಉಕ್ತಾಃ = ಹೇಳಲ್ಪಟ್ಟಂಥಾ ಕಲಿ, ಪೂರ್ವಾಃ = ಕಲಿಯು ಮೊದಲಾಗಿ ಉಳ್ಳವರಾದ ಸುರದ್ವಿಷಃ = ದೈತ್ಯರು. ಹೃಷ್ಟಾಃ (ಸಂತಃ) = ಸಂತುಷ್ಟರಾಗಿ ಮಣಿಮಂತಂ = ಮಣಿಮಂತನನ್ನು ಆಹೂಯ= ಕರೆದು ಸಂಭಾವ್ಯ = ಮಾನ ಮಾಡಿ. ಬಭಾಷಿರೇ = ಮಾತನಾಡಿದರು. ॥೧೭॥

ವಚನ ಪ್ರಕಾರ ಮಾಹ – ಯಾಹೀತ್ಯಾದಿ ನಾ॥ ಹೇ ಭ್ರಾತಃ ಸಹೋದರ ಹೇಮಣಿಮನ್ ಪರಮ ಪ್ರೀತಿ ವಿಷಯತ್ವಾದ್ಭ್ರಾತೃಪದೇನ ಸಂಬೋ ಧನಮ್। ಯಾಹಿ ಗಚ್ಛ, ಭೂಮಿಂ ಪ್ರತೀತಿ ಶೇಷಃ। ಯಾ ಪ್ರಾಪಣೇ ಧಾ. ಕರ್ತರಿ ಲಟ್. ಪರ. ಮ. ಏ.। ತುಭ್ಯಂ, ನಮಃ ಪಣಾಮೋಽಸ್ತು। ತ್ವಂ, ಮಹ್ಯಾಭುವ ಸ್ತಲೇ ಪ್ರದೇಶೇ, ದ್ವಿಜ ಕುಲ ಇತಿಃ ಶೇಷಃ, ಉತ್ಪದ್ಯಸ್ವ ಜಾಯಸ್ವ। ಪದಗತೌ – ಧಾ. ಕರ್ತರಿ ಲೋಟ್. ಆತ್ಮ. ಮ. ಏ। ಉದುಪ ಸೃಷ್ಟತ್ವಾಜ್ಞ ನ್ಯರ್ಥತ್ವಮಕರ್ಮಕ ತಾಚ। ವೇದಾಃ ಪುರಾಣಾ ನಿಚ ಆದ್ಯಾನಿಯಾ ನಾಂತಾಃ ವಿದ್ಯಾಶ್ಚತುರ್ದಶವಿದ್ಯಾಃ, ಭೃಶ ಮತ್ಯಂತಂ ದ್ರುತಂ ಶೀಘ್ರಂ, ವಿಪ್ಲಾವಯ ನಾಶಯ, ತತ್ವಜ್ಞಾನ ಜನನ ಶಕ್ತಿ ರಹಿತಾಃ ಕುರ್ವಿತ್ಯರ್ಥಃ। ಪ್ಲುಙ್ ಗತೌ–ಧಾ.ಸಕ. ಣಿಜಂತಃ ಕರ್ತರಿ ಲೋಟ್. ಪರ. ಮ. ಏ.। ವಿಪೂರ್ವಕತ್ವಾನ್ನಾಶನಾರ್ಥತ್ವಮ್ ॥೧೮॥

**ಯಾಹಿಭ್ರಾತರ್ನಮಸ್ತು ಭ್ಯಮುತ್ಪದ್ಯ ಸ್ವ ಮಹೀತಲೇ ।**
**ವಿದ್ಯಾವೇದ ಪುರಾಣಾದ್ಯಾ ಭೃಶಂ ವಿಪ್ಲಾವಯ ದ್ರುತಮ್ ॥೧೮॥**

ಅರ್ಥ:- ಮಾತಿನ ಪ್ರಕಾರವನ್ನು ಹೇಳುತ್ತಾರೆ - ಹೇ ಭ್ರಾತಃ = ಎಲೈ ಸಹೋದರನಾದ ಮಣಿಮಂತನೇ (ಪ್ರೀತಿಯಿಂದ ಭ್ರಾತೃಪದ ಪ್ರಯೋಗವೆಂತ ತಿಳಿಯುವುದು) (ತ್ವಂ= ನೀನು ಭೂಮಿಂಪ್ರತಿ = ಭೂಲೋಕವನ್ನು ಕುರಿತು) ಯಾಹಿ = ಹೋಗು. ತುಭ್ಯಂ = ನಿನಗೋಸ್ಕರ ನಮಃ = ನಮಸ್ಕಾರವು. (ತ್ವಂ=ನೀನು) ಮಹೀತಲೇ = ಭೂ ಪ್ರದೇಶದಲ್ಲಿ (ದ್ವಿಜಕುಲೇ = ಬ್ರಾಹ್ಮಣ ಕುಲದಲ್ಲಿ) ಉತ್ಪದ್ಯಸ್ವ = ಜನಿಸು ವೇದ, ಪುರಾಣ, ಆದ್ಯಾಃ = ವೇದಗಳು, ಪುರಾಣಗಳು - ಇವುಗಳೇ ಮೊದಲಾಗಿವುಳ್ಳಂಥಾ ವಿದ್ಯಾಃ = ವಿದ್ಯೆಗಳನ್ನು ಭೃಶಂ = ಅತ್ಯಂತವಾಗಿ. ದ್ರುತಂ = ಶೀಘ್ರವಾಗಿ ವಿ ಪ್ಲಾವಯ = ನಾಶಮಾಡು ॥೧೮॥

ವಿದ್ಯಾವಿಪ್ಲಾವನ ಪ್ರಕಾರ ಮಾಹ = ವಿದೂಷಯೇತಿ॥ ವಿಷ್ಣೋ ರ್ದೇಶತಃ ಕಾಲತೋ ಗುಣಶ್ಚ ವ್ಯಾಪ್ತಸ್ಯಹರೇಃ, ಗುಣೌನ್ ಜಗತ್ಸ್ರಷ್ಟೃತ್ವಾದೀನ್, ವಿದೂಷಯ ಮಿಥ್ಯಾತ್ವ ಕಥನಾದಿನಾ ನಿಂದಯ. ಕೇವಲೋ ನಿರ್ಗುಣ ಶ್ಚೇತಿ ಶ್ರುತೇ ರಾಪಾತ ಪ್ರತೀತಾರ್ಥ ಮಾಶ್ರಿತ್ಯ ನಿರ್ಗುಣಂ ಬ್ರಹ್ಮತತ್ವಂ ಬ್ರೂಹೀತಿ ಭಾವಃ । ದುಷವೈಕೃತ್ಯೇ - ಧಾ.ಸಕ. ಣಿ.ಜಂತ್ತಃ ಕರ್ತರಿ ಲೋಟ್. ಪರ. ಮ.ಏ.। ಜೀವಾನಾಂ ಐಕ್ಯಂ ಪರಸ್ಪರಂ ಬ್ರಹ್ಮಣಾ ಚಾ ಭೇದಂ, ಪ್ರತಿ ಪಾದಯ ತತ್ವಮಸೀತಿ ಶ್ರುತೇ ರಾಪಾತ ಪ್ರತೀತಿ ಮನುರುಧ್ಯಬ್ರೂಹಿ। ಪದಗತೌ - ಧಾ. ಸಕ. ಣಿ ಜಂತಃ ಕರ್ತರಿ ಲೋಟ್. ಪರ.ಮ.ಏ। ನನು ಭೀಮ ಭೀತ್ಯಾನೇದಂ ಮಯಾಕರ್ತುಂ ಶಕ್ಯಮಿತ್ಯತ ಆಹ- ಭೂಮಾವಿತಿ॥ ಭೂಮೌ ಭೂಲೋಕೇ ವೃಕೋದರಸ್ಯ ಭೀಮಸ್ಯಾ ಭಾವಾತ್, ತ್ವಂ, ಆಶಂಕಾಂಮೃತಿಶಂಕಾಂ, ಕರ್ತುಂ, ನಾರ್ಹಸಿ। ಅರ್ಹ ಪೂಜಾಯಾಂ ಯೋಗ್ಯತ್ವೇಚ - ಧಾ. ಕರ್ತರಿ ಲಟ್.ಪರ. ಮ. ಏ ॥೧೮॥

**ವಿದೂಷಯ ಗುಣಾ ನ್ವಿಷ್ಣೋ ರ್ಜೀ ವೈ ಕ್ಯಂ ಪ್ರತಿ ಪಾದಯ ।**
**ಭೂಮೌ ವೃಕೋದರಾ ಭಾವಾನ್ನಾಶಂಕಾಂ ಕರ್ತು ಮರ್ಹಸಿ ॥೧೯॥**

ಅರ್ಥ:- ವೇದನಾಶನ ಮಾಡುವ ರೀತಿಯನ್ನು ಹೇಳುತ್ತಾರೆ - ವಿಷ್ಣೋಃ = ವ್ಯಾಪ್ತನಾದ ಶ್ರೀಹರಿಯ ಗುಣಾನ್ = ಜಗತ್ಕರ್ತೃತ್ವಾದಿ ಗುಣಗಳನ್ನು ವಿದೂಷಯ = (ಮಿಥ್ಯಾತ್ವ ವರ್ಣನಾದಿಗಳಿಂದ) ನಿಂದಿಸು. "ಕೇವಲೋ ನಿರ್ಗುಣಶ್ಚ" ಎಂಬ ಶೃತಿಯ ಆಪಾತ ಪ್ರತೀತಿಯನ್ನು ಅವಲಂಬಿಸಿ ನಿರ್ಗುಣ ಬ್ರಹ್ಮನೇ ತತ್ವವೆಂತ

ಪ್ರತಿಪಾದಿಸು ಎಂತ ಭಾವ. ಜೀವ, ಐಕ್ಯಂ = ಜೀವರಿಗೆ (ಪರಸ್ಪರವಾಗಿಯು ಬ್ರಹ್ಮನಿಂದ ಕೂಡ) ಅಭೇದವನ್ನು ಪ್ರತಿಪಾದಯ = ನಿರೂಪಿಸು. "ತತ್ವಮಸಿ" ಎಂಬ ಶ್ರುತಿಯ ಆಧಾರದಿಂದ ಅಭೇದವನ್ನು ಪ್ರತಿಪಾದಿಸು ಎಂತ ಭಾವ. ಭೀಮ ಸೇನ ದೇವರ ದೆಸೆಯಿಂದ ನಾನು ಭಯಪಟ್ಟವನಾದ ಕಾರಣ ನಾನೀ ಕಾರ್ಯವನ್ನು ಹೇಗೆ ಮಾಡುವುದೆಂದರೆ ಹೇಳುತ್ತಾರೆ. – ಭೂಮೌ = ಭೂಲೋಕದಲ್ಲಿ ವೃಕೋದರ, ಅಭಾವಾತ್ = ಭೀಮ ಸೇನ ದೇವರ, ಇಲ್ಲದಿರೋಣ ದರ ದೆಸೆಯಿಂದ (ತ್ವಂ = ನೀನು) ಆಶಂಕಾಂ = ಮರಣ ಭಯವನ್ನು ಕರ್ತುಂ = ಮಾಡಲು. ನಾರ್ಹಸಿ = ಅರ್ಹನಾಗಬೇಡ ॥೧೯॥

ನನ್ವಿದಾನೀಂ ಭೀಮಸ್ಯ ಭೂಮಾವಭಾವೇಽಪ್ಯ ಸ್ಮದಾರಂಭ ವಿಜ್ಞಾನೇನ ಭೂಮಿಂ ಪ್ರತ್ಯಾಗ ಮನೇ ಕಿಮ್ಮಯಾ ವಿಧೇಯ ಮಿತ್ಯತ ಆಹ– ಅಸ್ಮಾಸ್ವಿತಿ॥ ಸ್ವಸ್ಥಃ ಸ್ಥಿರ ಚಿತ್ತಃ ಸ್ವರ್ಗಸ್ಥ ಶ್ಚಾಪಿ, ಅಯಂಭೀಮಃ, ಅಸ್ಮಾಸು ಮಣಿಮತ್ತ್ರಭೃತಿಷು, ಬದ್ಧಂ ಸ್ಥಿರೀಕೃತಂ ವೈರಂ ವಿರೋಧೋ ಯೇನ ತಥೋಕ್ತಸ್ಸನ್, ಅಸ್ವಸ್ಥತಾಂ ಕದಾನು ದೈತ್ಯಾನ್ ಹನಿಷ್ಯಾಮೀತ್ಸುತ್ಕಟ ಮನಶ್ಚಾಂಚಲ್ಯಂ, ಗತೋಽಪಿ, ವಿಷ್ಣೋರ್ಹರೇಃ, ಅನುಜ್ಞಾಭಾವತಃ ಆಜ್ಞಾ ವಿರಹಾತ್, ಅಧುನಾ ಸಂಪ್ರತಿ ಭವತ್ರಯತ್ನ ಕಾಲ ಏವ, ನಾವತರತಿನ ಪ್ರಾದುರ್ಭವತಿ। ಅಧುನೇತಿ ವರ್ತಮಾನ ಕಾಲ ವಾಚ್ಯ ವ್ಯಯ ಯೋಗಾದವತರತೀತಿ ವರ್ತಮಾನ ನಿರ್ದೇಶಃ। ತೇನ ನಭವಿಷ್ಯದ್ಯರ್ಥ ಕಲಕಾರಾಭಾವ ವಿರೋಧಃ ॥೨೦॥

**ಅಸ್ಮಾಸು ಬದ್ಧವೈರಃ ಸಂತ್ಸ್ವರ್ಗಸ್ಥೋಽಪ್ಯ ಸ್ವಸ್ಥತಾಂ ಗತಃ ।**
**ಅನುಜ್ಞಾಭಾವತೋ ವಿಷ್ಣೋ ನಾಧುನಾ ವತರತ್ಯಯಮ್ ॥೨೦॥**

ಅರ್ಥ:– ಈಗ ಭೀಮಸೇನದೇವರು ಭೂಮಿಯಲ್ಲಿಲ್ಲದಿದ್ದರೂನು ನಾವು ಮಾಡುವ ವೇದ ವಿಪ್ಲಾವನವನ್ನು ತಿಳಿದುಕೊಂಡು ಭೂಮಿಯನ್ನು ಕುರಿತು ಬಂದರೆ ನಾನೇನು ಮಾಡಬಹುದುದೆಂದರೆ ಹೇಳುತ್ತಾರೆ – ಸ್ವಸ್ಥಾಪಿ = ಸ್ಥಿರ ಚಿತ್ತರು ಸ್ವರ್ಗಲೋಕದಲ್ಲಿರುವವರು ಆದರೂನು ಅಯಂ = ಈ ಭೀಮ ಸೇನ ದೇವರು ಅಸ್ಮಾಸು = (ದೈತ್ಯರಾದ) ನಮ್ಮಲ್ಲಿ ಬದ್ಧ, ವೈರಃ (ಸನ್) = ಸ್ಥಿರೀಕೃತವಾದ, ದ್ವೇಷವುಳ್ಳವರಾಗಿ ಅಸ್ವಸ್ಥತಾಂ = (ಯಾವಾಗ ದೈತ್ಯ ಸಂಹಾರವನ್ನು ನಾನು ಮಾಡುವೆನೆಂತ ಅಧಿಕವಾದ) ಚಪಲಚಿತ್ತ ತ್ವ ವನ್ನು ಗತೋಽಪಿ = ಹೊಂದಿದವರಾದರೂನು ವಿಷ್ಣೋಃ = ಶ್ರೀಪರಮಾತ್ಮನ ಅನುಜ್ಞಾ, ಅಭಾವತಃ =

ಅಪ್ಪಣೆಯು ಇಲ್ಲದಿ ರೋಣದರ ದೆಸೆಯಿಂದ ಅ ಧುನಾ = ಈಗ ನಾವತರತಿ = ಅವತರಿಸುವುದಿಲ್ಲ ॥೨೦॥

ಜನ್ಮಾನಂತರಂ ಸಂನ್ಯಾಸ ಗ್ರಹಣಾನ್ವೇಷಣೇಯರ್ಾನ್ ಜನಾನಾಹ ವಂಶ್ಯಾ ಇತಿ॥ ಸನಕಾದೀನಾಂ, ವಂಶ್ಯಾಃ ಸಂನ್ಯಾಸ ಗ್ರಹಣೇನ ವಿದ್ಯಾ ಗ್ರಹಣೇನ ಚ ವಂಶೇಭವಾಃ, ಏಕ ದಂಡಿನಃ ತ್ರಿದಂಡಾಶ್ಚ, ತೇಷಾಂ ಸನಕಾದೀನಾ ಮನುವ್ರತಾಃ ಅನುಸಾರಿಣಃ, ಯತಯ ಸಂನ್ಯಾಸಿನಃ ಅಧುನಾ, ಭುವಿ ವರ್ತಂತೇ ಸಂತಿ। ವೃತುವರ್ತನೆ – ಧಾ. ಅ.ಕ.ಕರ್ತರಿ ಲಟ್.ಪರ.ಪ್ರ.ಬ ॥೨೧॥

**ವಂಶ್ಯಾಸ್ತು ಸನಕಾದೀನಾಮಧುನಾಯತ ಯೋ ಭುವಿ ।**
**ಏಕದಂಡಾ ಸ್ತ್ರಿದಂಡಾ ಶ್ಚ ವರ್ತಂತೇ ತದನುವ್ರತಾಃ ॥೨೧॥**

ಅರ್ಥ:- ಭೂಮಿಯಲ್ಲಿ ಹುಟ್ಟಿದ ಮೇಲೆ ಯಾರ ಕಡೆಯಿಂದ ಸನ್ಯಾಸವನ್ನು ಗ್ರಹಿಸಬೇಕಾದ್ದುದನ್ನು ಹೇಳುತ್ತಾರೆ – ಸನಕ, ಆದೀನಾಂ = ಸನಕರು, ಮೊದಲಾಗಿವುಳ್ಳವರ ವಂಶ್ಯಾಃ = (ಸನ್ಯಾಸ ಪರಂಪೆರೆಯಲ್ಲಿಯು ವಿದ್ಯಾಪರಂ ಪರೆಯಲ್ಲಿಯು) ವಂಶಸ್ಥರಾದ ಏಕದಂಡಾಃ = ಒಂದು ದಂಡವುಳ್ಳವರಾದ ತ್ರಿದಂಡಶ್ಚ = ಮೂರು ದಂಡಗಳುವುಳ್ಳವರೂನು ಆದ ತತ್, ಅನುವ್ರತಾಃ = ಆಸನಕಾದಿಗಳಗೆ, ಅನುಸರಿಸಿದವರಾದ ಯತಯಃ = ಸನ್ಯಾಸಿಗಳು ಅದ್ಯ = ಈಗ ಭುವಿ = ಭೂಮಿಯಲ್ಲಿ ವರ್ತಂತೇ = ಇದ್ದಾರೆ.

ಪರತೀರ್ಥೇತಿ॥ ತತ್ರ ತೇಷು ಸಂನ್ಯಾಸಿಷು ಮಧ್ಯೇ, ಏಕೋಮುಖ್ಯಃ ಮಹತ್ ಅಧಿಕಂ ತಪೋಯಸ್ಯ ಸತಥೋಕ್ತಃ, ಮಹಾತ್ಮಾ ಇತಿ ಪಾಠೇ ಅತಿಶಯೇನ ಮಹಾ ನಿತ್ಯರ್ಥಃ। ಪರತೀರ್ಥ ಇತ್ಯಭಿಧಾ ನಾಮಯಸ್ಯ ಸಃ, ಯತಿ ಸಂನ್ಯಾಸೀ, ಅಸ್ತೀ ತಿಶೇಷಃ। ತಂಪರ ತೀರ್ಥಂ, ಆಶ್ರಿತ್ಯ, ತಚ್ಛಿಷ್ಯೋಭೂತ್ವೇತ್ಯರ್ಥಃ। ಪ್ರವರ್ತಸ್ವ ವೇದ ವಿಪ್ಲವನಾದೌ ಪ್ರವೃತ್ತೋಭವ। ವೃತುವರ್ತನೇ – ಧಾ. ಲೋಟ್. ಆತ್ಮ. ಮ. ಏ.। ತತ ಸ್ತಚ್ಛಿಷ್ಯತ್ವಾತ್, ತ್ವಂ ಜನ್ಯೈಃ, ಸಂಭಾವ್ಯಸೇ ಮಾನ್ಯಸೇ। ಭೂಪ್ರಾಪ್ತೌ– ಧಾ. ಣಿಜಂತಃ. ಕರ್ಮಣಿ ಲಟ್. ಮ. ಏ.। ಸಂಪೂರಕತ್ವಾನ್ನಾ ನಾರ್ಥಕಲಾ॥

**ಪರತೀರ್ಥಾಭಿದಸ್ತತ್ರ ಯತಿರೇಕೋ ಮಹಾತಪಾಃ ।**
**ತಮಾಶ್ರಿತ್ಯ ಪ್ರವರ್ತಸ್ವ ತತಃ ಸಂಭಾವ್ಯಸೇ ಜನ್ಯೈಃ ॥೨೨॥**

ಅರ್ಥ:- ತತ್ರ = ಆ ಸನ್ಯಾಸಿಗಳ ಮಧ್ಯದಲ್ಲಿ ಏಕಃ = ಮುಖ್ಯರಾದ ಮಹಾ, ತಪಾಃ = ಅಧಿಕವಾದ ತಪಸ್ಸುವುಳ್ಳಂಥಾ. ಪರತೀರ್ಥ, ಅಭಿದಃ = ಪರತೀರ್ಥರೆಂತ, ಹೆಸರುಳ್ಳ ಯತಿಃ = ಸನ್ಯಾಸಿಗಳು (ಅಸ್ತಿ = ಇದ್ದಾರೆ, ತ್ವಂ = ನೀನು) ತಂ = ಆ ಪರತೀರ್ಥರನ್ನು ಆಶ್ರಿತ್ಯ = ಅವಲಂಬಿಸಿ (ಅವರ ಶಿಷ್ಯನಾಗಿ ಎಂತ ಭಾವ) ಪ್ರವರ್ತಸ್ವ = (ವೇದವಿಪ್ಲಾವನಾರ್ಥವಾಗಿ) ಪ್ರವರ್ತಿಸು. ತತಃ = ಆ ಪರತೀರ್ಥರಿಗೆ ಶಿಷ್ಯನಾಗೋಣದರ ದೆಸೆಯಿಂದ ಜನ್ಯೈಃ = ಜನರಿಂದ ಸಂಭಾವ್ಯಸೇ = ಗೌರವಿಸಲ್ಪಡುತ್ತೀ ॥೨೨॥

ಸಂನ್ಯಾಸಾ ನಂತರ ಕಾರ್ಯಮಾಹ - ವೇದಾಂತೇತಿ॥ ಹೇಮಣಿಮನ್‌ತ್ವಂ, ವೇದಾನಾಮಂತೋ ನಿರ್ಣಯೋ ಯೇಭ್ಯ ಸ್ತಾನಿ ಚತಾನಿ ಸೂತ್ರಾಣಿ ಬ್ರಹ್ಮ ಸೂತ್ರಾಣಿ ಚತ್ಯೈಃ, ಯದ್ವಾ-ವೇದಾಂತಾ ಉಪನಿಷದಶ್ಚ, ಸೂತ್ರಾಣಿ ಚತ್ಯೈಃ, ಏಕೋ ಭೇದರಹಿತ ಆತ್ಮಾ ಸದ್ರೂಪಃ ಏಕಾತ್ಮಾ ತಸ್ಯ ಭಾವ ಐಕಾತ್ಮ್ಯ ಮಾತ್ಮೈಕತ್ವ ಮಿತ್ಯರ್ಥಃ। ತದ್ಗೋಚರೋ ವಿಷಯೋಯ ಸ್ಯತತ್। ಏಕಾತ್ಮ ಗೋಚರ ಇತಿ ಪಾಠೇ ಏಕೋ ಭೇದ ವರ್ಜಿತ ಆತ್ಮಾ ಸದ್ರೂಪಃ ಗೋಚರೋ ವಿಷಯೋ ಯಸ್ಯತದಿತ್ಯರ್ಥಃ। ಅಸ್ಮಾಕಂ ದೈತ್ಯಾನಾಂ, ಮತಂ, ವಿತತ್ಯ ವಿಸ್ತಾರ್ಯ ಆತ್ಮೈಕತ್ವ ಪರತಯಾ ಉಪನಿಷದಸ್ಸೂತ್ರಾಣಿ ಚ ಯೋಜಯ ದ್ಭಾಷ್ಯಂ ವಿಧಾಯೇತಿ ಭಾವಃ। ಸಕಲಾನ್ ಸಮಸ್ತಾನ್, ವೇದಾನ್ ದ್ವಾಸುಪರ್ಣೇತ್ಯಾದೀನ್, ಅತತ್ವ ಮಯಥಾವಸ್ಥಿತಂ ಮಿಥ್ಯಾಭೂತ ಮಾವೇದಯಂತೀತ್ಯ ತತ್ವಾವೇದಕಾಸ್ತಾನ್, ವದಬ್ರೂಹಿ। ಕುರ್ವಿತಿ ಪಾಠೇ ತಥಾ ಪ್ರತಿಭಾ ಸಮಾನಾನ್ ತಾನ್ ಕುರ್ವಿತಿ ಭಾವಃ ॥೨೩॥

**ವೇದಾಂತ ಸೂತ್ರೈರ ಸ್ಮಾಕಂ ಮತ ಮೈಕಾತ್ಮ್ಯ ಗೋಚರಮ್ ।**
**ವಿತತ್ಯ ಸಕಲಾನ್ವೇದಾ ನತತ್ವಾ ವೇದ ಕಾನ್ವದ ॥೨೩॥**

ಅರ್ಥ:- ಸನ್ಯಾಸಾನಂತರದಲ್ಲಿ ಮಾಡತಕ್ಕ ಕಾರ್ಯವನ್ನು ಹೇಳುತ್ತಾರೆ. - (ಹೇಮಣಿಮನ್ = ಎಲೈ ಮಣಿಮಂತನೇ ತ್ವಂ = ನೀನು) ವೇದಾಂತ ಸೂತ್ರೈಃ = ವೇದಗಳಿಗೆ ನಿರ್ಣಯವುಳ್ಳಂಥಾ, ಬ್ರಹ್ಮಸೂತ್ರಗಳಿಂದ ಅಥವಾ - ಉಪನಿಷತ್ತುಗಳು, ಬ್ರಹ್ಮಸೂತ್ರಗಳು ಇವುಗಳಿಂದ ಐಕಾತ್ಮ್ಯ, ಗೋಚರಂ = ಏಕಾತ್ಮತ್ವವೇ (ಜೀವ ಬ್ರಹ್ಮಾಭೇದವೇ) ವಿಷಯವಾಗಿವುಳ್ಳಂಥಾ ಅಸ್ಮಾಕಂ = ನಮ್ಮಗಳ ಮತಂ = ಮತವನ್ನು ವಿತತ್ಯ = ವಿಸ್ತರಿಸಿ (ಐಕ್ಯ ಪರವಾಗಿ ಸೂತ್ರೋಪ ನಿಷತ್ತುಗಳನ್ನು ಯೋಜಿಸುವ ಭಾಷ್ಯಾದಿಗಳನ್ನು ರಚಿಸಿ ಎಂತ ಭಾವ) ಸಕಲಾನ್ = ಸಮಸ್ತಗಳಾದ ವೇದಾನ್

= (ದ್ವಾಸುಪರ್ಣೇತ್ಯಾದಿ) ವೇದಗಳನ್ನು ಅತತ್ವ, ಆವೇದಕಾನ್ = ಅಯಥಾಸ್ಥಿತವನ್ನು (ಮಿಥ್ಯಾಭೂತವನ್ನು) ಪ್ರತಿಪಾದಿಸುವಂಥವುಗಳನ್ನಾಗಿ ವದ = ಹೇಳು ॥೨೩॥

ನನುಸಿದ್ಧ ಮವ್ಯೈಕಾತ್ಮ್ಯಪರತ್ವಂ ಸೂತ್ರೋಪನಿಷದಾಮ್, ಯದರ್ಥಂ ಮಯಾ ಪ್ರಯತಿತವ್ಯಮಿತ್ಯತೋ ಸೀದಂ ಸೂತ್ರೋಪನಿಷತ್ತಾತ್ಪರ್ಯ ವಿಷಯ ಇತ್ಯಾಹ – ಜೀವೇಭ್ಯ ಇತಿ॥ ಜೀವೇಭ್ಯಃ ದುಃಖಾಜ್ಞಾನಾದಿಯುಕ್ತೇಭ್ಯಶ್ಚೇತನೇಭ್ಯಃ, ಅನ್ಯೋಽಭಿನ್ನಃ, ಸಸ್ಟೃತ್ವಂ ಜಗದುತ್ಪಾದಕತ್ವ ಮಾದಿರ್ಯೇಷಾಂ ಪಾತೃತ್ವಾದೀನಾಂತೇತಥೋಕ್ತಾಃ ಗುಣಾ ಏವಾತ್ಮಾ ಸ್ವರೂಪಂ ಯಸ್ಯಸಃ, ಹರಿರ್ವಿಷ್ಣುಃ, ಬ್ರಹ್ಮಾ ಇತ್ಯೇವಂ ವೇದಾಂತಾನಾಮುಪ ನಿಷಾದಾಂ ಸೂತ್ರಾಣಾಂ ಬ್ರಹ್ಮಸೂತ್ರಾಣಾಂಚ ಹೃದಯ ಮಭಿಪ್ರಾಯಂಚ ತಿರಸ್ಕುರು ಆಚ್ಛಾದಯ। ದುಕೃಞ್ ಕರಣೇ – ಧಾ.ಸಕ. ಕರ್ತರಿ ಲೋಟ್. ಪರ. ಮ. ಏ. ॥೨೪॥

**ಜೀವೇ ಭ್ಯೋಽನ್ಯೋಽಹರಿರ್ಬ್ರಹ್ಮ ಸ್ರಷ್ಟೃತ್ವಾದಿ ಗುಣಾತ್ಮಕಃತಃ ।**
**ಇತಿ ವೇದಾಂತ ಸೂತ್ರಾಣಾಂ ಹೃದಯಂಚ ತಿರಸ್ಕುರು ॥೨೪॥**

ಅರ್ಥ:– ಸೂತ್ರಗಳಗೂ ಉಪನಿಷತ್ತುಗಳಗೂನು ಐಕ್ಯಪರತ್ವವು ಸಿದ್ಧವಾಗಿಯೇ ಇರುವಾಗ ನಾನು ಪ್ರತಿಪಾದಿಸುವುದೇಕೆ ಎಂದರೆ ಐಕ್ಯವು ವಾಸ್ತವವಾಗಿ ಸೂತ್ರಾರ್ಥವಲ್ಲವೆಂತ ಹೇಳುತ್ತಾರೆ. – ಜೀವೇಭ್ಯಃ = ಜೀವರ ದೆಸೆಯಿಂದ ಅನ್ಯಃ = ಭಿನ್ನನಾದ ಸ್ರಷ್ಟೃತ್ವ, ಆದಿ, ಗುಣ, ಆತ್ಮಕಃ = ಜಗತ್ಕರ್ತೃ ತ್ವವು ಮೊದಲಾಗಿವುಳ್ಳ, ಗುಣಗಳೇ, ಸ್ವರೂಪವಾಗಿವುಳ್ಳಂಥಾ ಹರಿಃ = ಶ್ರೀ ವಿಷ್ಣುವು ಬ್ರಹ್ಮಾ = ಬ್ರಹ್ಮನು. ಇತಿ = ಹೀಗೆಂತೆಂಬುವುದದಾದ ವೇದಾಂತ, ಸೂತ್ರಾಣಾಂ = ಉಪನಿಷತ್ತುಗಳು, ಸೂತ್ರಗಳು – ಇವುಗಳ ಹೃದಯಂಚ = ಅಭಿಪ್ರಾಯವನ್ನು ಕೂಡ ತಿರಸ್ಕುರು = ಆಚ್ಛಾದನ ಮಾಡು ॥೨೪॥

ಏವಂ ವಿರುದ್ಧಾರ್ಥ ಪ್ರತಿ ಪಾದಕಾ ಮತ್ಕೃತಾ ಗ್ರಂಥಾಃ ಕಥಂ ಸಜ್ಜನ ಗ್ರಾಹ್ಯೋ ಭವೇಯು ರಿತ್ಯತ ಆಹ – ಅಸ್ಮದಿತಿ॥ ಸಾಂಖ್ಯಂ ಶುದ್ಧಾತ್ಮ ತತ್ವ ಜ್ಞಾನಂ ಯೋಗೋ ಭಗವನ್ನಿಷ್ಠಾಚ ಏಷಾಂ ಸ್ತ ಇತಿ ತಥೋಕ್ತಾಃ, ಸಜ್ಜನಾಃ, ಅಸ್ಮಾಕ ಮಸುರಾಣಾಮಾವೇಶ ಸ್ಯ ಅಂತಃ ಪ್ರವೇಶ್ಯ ಬಲತ ಸ್ಸಾಮರ್ಥ್ಯಾತ್, ಅಸುರಾವೇಶ ಬಲತ ಇತಿಪಾಠಃ। ಕಲೇಃ ಕಾಲಸ್ಯ, ಶಕ್ತ್ಯಾಚ, ಪೀಡಿತಾಬಾಧಿತಾ ಸ್ಸಂತಃ, ಮತಿನಃ ಮಿಥ್ಯಾಜ್ಞಾನಾದಿ ದೋಷಯುಕ್ತ ಆತ್ಮಾಮನೋ ಯೇಷಾಂತೇ ತಾದೃಶಾಃ, ಭವಂತಿ ಭವಿಷ್ಯಂತಿ। ವರ್ತಮಾನ ಸಾಮಿಪ್ಯಾದ್ವರ್ತ ಮಾನವದ್ವ್ಯಪದೇಶಃ ॥೨೫॥

**ಅಸ್ಮಾದಾವೇಶ ಬಲತಃ ಕಲೇಶ್ಯಕ್ತ್ಯಾಚ ಪೀಡಿತಾಃ ।**
**ಭವಂತಿ ಮಲಿನಾತ್ಮಾನ ಸ್ಸಜ್ಜನಾ ಸ್ಸಾಂಖ್ಯಯೋಗಿನಃ ।।೨೫।।**

ಅರ್ಥ:- ಈ ಪ್ರಕಾರವಾಗಿ ವಿರುದ್ಧಾರ್ಥ ಪ್ರತಿ ಪಾದಕಗಳಾದ ನನ್ನಿಂದ ಕೃತಗಳಾದ ಗ್ರಂಥಗಳು ಹೇಗೆ ಸಜ್ಜನರಿಂದ ಗ್ರಾಹ್ಯಗಳಾಗುತ್ತವೆಂತೆಂದರೆ ಹೇಳುತ್ತಾರೆ. - ಸಾಂಖ್ಯ, ಯೋಗಿ ನಃ = ಶುದ್ಧಾ ತ್ಮ ತತ್ವ ಜ್ಞಾನವು, ಭಗವ ನ್ನಿಷ್ಠೆಯು - ಇವುಗಳು ವುಳ್ಳವರಾದ ಸಜ್ಜನಾಃ = ಯೋಗ್ಯ ಜನರು ಅಸ್ಮತ್, ಆವೇಶ, ಬಲತಃ = ನಮ್ಮಗಳ, ಆವೇಶದ, ಸಾಮರ್ಥ್ಯದ ದೆಸೆಯಿಂದ ಕಲೇಃ = ಕಲಿ ಕಾಲದ ಶಕ್ತ್ಯಾಚ = ಸಾಮ ರ್ಥ್ಯದಿಂದ ಲೂನು ಪೀಡಿತಾಃ (ಸಂತಃ) = ಬಾಧಿತರಾಗಿ ಮಲಿನ ಆತ್ಮಾನಃ = ಮಿಥ್ಯಾಜ್ಞಾನಾದಿ ದೋಷ ಯುಕ್ತವಾದ ಮನಸ್ಸುವುಳ್ಳವರು ಭವಂತಿ = ಆಗುವರು ।।೨೫।।

ಮಿಥ್ಯಾವಾದಮಿತಿ।। ತತೋಮನೋಮಾಲಿನ್ಯಾತ್, ತೇಸಜ್ಜನಾ ಅಪಿ, ಕೇಚಿತ್, ಮಿಥ್ಯಾವಾದಂ ವಿಶ್ವಂ ಮಿಥ್ಯೇತಿ ವಾದೋ ಯಸ್ಮಿನ್ ಸ್ತಚ್ಛಾಸ್ತ್ರಂ, ಶ್ರದ್ಧದತೇ ವಿಶ್ವಸಂತಿ। ಡುದಾಞ್ ಧಾರಣಾಪೋಷಣಾಯೋಃ- ಧಾ. ಸಕ. ಕರ್ತರಿ ಲಟ್. ಆತ್ಮ. ಪ್ರ.ಬ. । ಪರೇ ಅಸುರಾವೇಶವಶೀಕೃತೇಭ್ಯೋ ಭಿನ್ನಾಸ್ತದ್ವಾದ ನಿರಾಕರಣಾ ಸಮರ್ಥಾಃ, ಮಿಥ್ಯಾವಾದಂ, ಉದಾಸತೇ ಉಪೇಕ್ಷಂತೇ। ಉತ್ಪೂರ್ವಕಾ ದಾಸ ಉಪವೇಶನೇ- ಇತ್ಯತ ಆತ್ಮನೇ ಪದೇ ಪ್ರಥಮ ಪುರುಷ ಬಹುವಚನಮ್। ಕಶ್ಚಿದೇವಶಕ್ತಿಮಾನ್ ಪಂಡಿತಃ, ಮಿಥ್ಯಾ ವಾದಂ, ನಿರಾಕರ್ತುಂ ಸರ್ವಸ್ಯಮಿ ಥ್ಯಾತ್ವೇಶ್ರು ತ್ಯರ್ಥತ ಯಾಂಗೀಕೃತೇ ಸರ್ವಾಂತಃ ಪಾತಿನೋ ಗುರುಶಿಷ್ಯ ಭಾವೋಪಾಸ್ಯೋಪಾಸಕ ಭಾವಾದೇರ್ಮಿಥ್ಯಾತ್ವಾ ಪತ್ಯಾ ವೇದಾಂತ ಶ್ರವಣಾದ್ಯ ಭಾವ ಪ್ರಸಂಗ ಇತ್ಯಾದಿರೂಪೇಣ ದೂಷಯಿತುಂ, ಸಮೀಹತೇ ಯತತೇ। ಈಹ ಚೇಷ್ಟಾಯಾಂ - ಧಾ. ಕರ್ತರಿ ಲಟ್. ಆತ್ಮ. ಪ್ರ. ಏ.। "ಕೇಚಿಚ್ಛ್ರದ್ದಧಿರೇಪರೇ। ಉದಾಸತೇ ನಿರಾಕರ್ತುಂ ಕೇಚಿದೇವ ಸಮೀಹತೇ" ಇತಿ ಪಾಠಸ್ತು ಲೇಖಕ ದೋಷಾದಿ ನಿಬಂಧನಃ ಪ್ರಾಚೀನ ಕೋಶೇಷ್ವದರ್ಶನಾತ್ ಅಸಂಗ ತತ್ವಾಚ್ಚೋಪೇಕ್ಷ್ಯಃ ।।೨೬।।

**ಮಿಥ್ಯಾವಾದಂ ತತಸ್ತೇಽಪಿ ಕೇಚಿಚ್ಛ್ರದ್ದಧಿರೇ ಪರೇ।**
**ಉದಾಸತೇ ನಿರಾಕರ್ತುಂ ಕಶ್ಚಿದೇವ ಸಮೀಹತೇ ।।೨೬।।**

ಅರ್ಥ:- ತತಃ ಆ (ಮನಸ್ಸು ದೋಷಯುಕ್ತವಾಗುವ) ಕಾರಣದ ದೆಸೆಯಿಂದ ತೇಪಿ = ಆ ಸಜ್ಜನರು ಕೂಡ ಕೇಚಿತ್ = ಕೆಲವರು ಮಿಥ್ಯಾ, ವಾದಂ = (ಸರ್ವವು) ಮಿಥ್ಯಾ ಭೂತವೆಂತೆಂದು, ವಾದ ವುಳ್ಳ ಶಾಸ್ತ್ರವನ್ನು ಶ್ರದ್ದಥತೇ = ವಿಶ್ವಾಸ ಮಾಡುತ್ತಾರೆ. ಪರೇ = (ಅಸುರಾವೇಶ ಬಲದಿಂದ ದುಷ್ಟ ಮನಸ್ಕರಾದವರಾಗಿ ಮಿಥ್ಯಾವಾದ ನಿರಾಕರಣದಲ್ಲಿ ಶಕ್ತಿರ ಹಿತರಾದ) ಮತ್ತು ಕೆಲವು ಜನರು ಮಿಥ್ಯಾ, ವಾದಂ (ಜಗತ್ತು) ಮಿಥ್ಯಾ ಭೂತವೆಂದು, ವಾದವುಳ್ಳ ಶಾಸ್ತ್ರವನ್ನು ಉದಾಸತೇ = ಉಪೇಕ್ಷಿಸುತ್ತಾರೆ. ಕಶ್ಚಿದೇವ = (ಸಮರ್ಥನಾದ) ಒಬ್ಬಾನೊಬ್ಬನೇವೆ ಮಿಥ್ಯಾವಾದಂ = ಮಿಥ್ಯಾವಾದವನ್ನು ನಿರಾಕರ್ತುಂ = ನಿರಾಕರಿಸುವುದಕ್ಕೋಸ್ಕರ ಸಮೀ ಹತೇ = ಪ್ರಯತ್ನಿಸುತ್ತಾನೆ. ॥೨೬॥

ನನ್ವಸಹಾಯಸ್ಯಮಮ ಕಥಮಿದಂ ಕಾರ್ಯಂ ಸುಕರಸ್ಯಾದಿತ್ಯತ ಆಹ- ಅಭಿಪ್ರಾಯಾದಿತಿ॥ ಅಸ್ಮಾಕಂಜನಾಃ ದೈತ್ಯಾಃ, ಕೇಚತ್ಕತಿಪಯೇ, ಅಭಿಪ್ರಾಯಾತ್ ವೇದವಿದ್ಯೋತ್ಸಾದ ನಾಭಿಪ್ರಾಯಾತ್, ಕರ್ಮತಃ ಜನ್ಮಾಂತರ ಪ್ರಾಪಕ ಕರ್ಮ ವಶಾದ್ವಾ, ಭುವಿ ಭೂಮೌ, ಜಾತಾ ಉತ್ಪನ್ನಾಃ ಸಂತಿ । ಅನ್ಯೇ ಜನಿಷ್ಯಂತಿ, ತ್ವಜನ್ಮಾ ನಂತರ ಮಿತಿ ಶೇಷಃ । ಅಂತಃ, ತ್ವಂ, ನಿಸ್ಸಹಾಯ್ಯ ರಹಿತಃ, ನಜಾಯಸೇ ನಭವಸಿ। ಜನಿಪ್ರಾದುರ್ಭಾವೇ- ಧಾ. ಅಕ. ಕರ್ತಂ (ಜನಿಷ್ಯಂತಿ) ಲೃಟ್. ಪರ. ಪ್ರ. ಬ (ಜಾಯಸೇ) ಲಟ್. ಆತ್ಮಮ.ಏ ॥೨೭॥

**ಅಭಿಪ್ರಾಯಾತ್ಕರ್ಮತೋವಾ ಕೇಚಿದಸ್ಮಜ್ಜನಾ ಭುವಿ ।**
**ಜಾತಾ ಅನ್ಯೇ ಜನಿಷ್ಯಂತಿ ನಿಸ್ಸಹಾಯೋ ನಜಾಯಸೇ ॥೨೭॥**

ಅರ್ಥ:- ಅಸಹಾಯನಾಗಿ ನಾನೀಕಾರ್ಯವನ್ನು ಹೇಗೆ ಮಾಡಬಹುದೆಂದರೆ ಹೇಳುತ್ತಾರೆ - ಅಸ್ಮತ್, ಜನಾಃ = ನಮ್ಮ ಜನರು ಕೇಚಿತ್ = ಕೆಲವರು ಅಭಿಪ್ರಾಯಾತ್ = (ವೇದವಿದ್ಯೋತ್ಸಾದನ ವಿಷಯಕವಾದ) ಅಭಿಪ್ರಾಯದ ದೆಸೆಯಿಂದ ಕರ್ಮತೋವಾ = (ಜನ್ಮಾಂತರ ಪ್ರಾಪಕವಾದ) ಕರ್ಮದ ದೆಸೆಯಿಂದಲಾದರೂನು ಭುವಿ = ಭೂಮಿಯಲ್ಲಿ ಜಾತಾಃ = ಹುಟ್ಟಿದ್ದಾರೆ. ಅನ್ಯೇ = ಉಳಿದವರು (ತ್ವಜ್ಜನ್ಮಾಂತರಂ = ನಿನ್ನ ಹುಟ್ಟೋಣದರ ಅನಂತರದಲ್ಲಿ) ಜನಿಷ್ಯಂತಿ = ಉದ್ಭವಿಸುವರು । ಆದ ಕಾರಣದ ದೆಸೆಯಿಂದ ತ್ವಂ = ನೀನು) ನಿಸ್ಸಹಾಯಃ = ಸಹಾಯರಹಿತನು ನಜಾಯಸೇ = ಆಗುವುದಿಲ್ಲ ॥೨೭॥

ಇತೀತಿ॥ ಇತ್ಯೇವಂ, ದೈತ್ಯೈಃ ಕಲ್ಯಾದಿಭಿಃ, ಸಮಾದಿಷ್ಟ ಆಜ್ಞಪ್ತಃ, ಮಣಿಮಾನ್, ಭೀಮಸ್ಯವೃಕೋದರಸ್ಯ ಭೀಮತಾಂ ಭಯಂಕರ ತಾಂ ಮನಸಾ, ಶಂಕಮನೋಽಪಿ ಭುವಿಭೂಮೌ, ಉತ್ಪತ್ತುಂ, ಮನಃ, ದಧೇ, ಭುವ್ಯುತ್ಪತ್ತು ಮನುಮೇನ ಇತಿಭಾವಃ। ಡು ಧಾಞ್ ಧಾರಣ ಪೋಷಣಯೋಃ ಧಾ.ಸಕ.ಕರ್ತರಿ ಲಟ್. ಆತ್ಮ. ಪ್ರ.ಏ. ॥೨೮॥

**ಇತಿ ದೈತ್ಯೈಸ್ಸಮಾದಿಷ್ಟೋ ಮಣಿಮಾನ್ಭೀಮ ಭೀಮತಾಮ್ ।**
**ಮನಸಾ ಶಂಕ ಮಾನೋಽಪಿ ಭುವ್ಯುತ್ಪತ್ತುಂ ಮನೋದಧೇ ॥೨೮॥**

ಅರ್ಥ:– ಇತಿ = ಈ ಪ್ರಕಾರವಾಗಿ ದೈತ್ಯೈಃ = (ಕಲ್ಯಾದಿ) ದೈತ್ಯರಿಂದ ಸಮಾದಿಷ್ಟಃ = ಆಜ್ಞಪ್ತನಾದ ಮಣಿಮಾನ್ = ಮಣಿಮಂತನು ಭೀಮ, ಭೀಮತಾಂ = ಭೀಮಸೇನ ದೇವರ, ಭಯಂಕರತ್ವವನ್ನು ಮನಸಾ = ಮನಸ್ಸಿನಿಂದ ಶಂಕಮಾನೋಪಿ = ಶಂಕಿಸುವವನಾಗಿದ್ದರೂನು ಭುವಿ = ಭೂಮಿಯಲ್ಲಿ ಉತ್ಪತ್ತುಂ = ಜನಿಸುವುದಕ್ಕೋಸ್ಕರ ಮನಃ = ಮನಸ್ಸನ್ನು ದಧೇ = ಧರಿಸಿದನು, ಒಪ್ಪಿಕೊಂಡನೆಂತ ಭಾವ ॥ ೨೮॥

ಕಥಾಂತರ ಮಾಹ– ತದಿತಿ। ತತ್ಕಾಲೇ ಮಣಿ ಮದುತ್ಪತ್ತಿ ನಿರ್ಣಯ ಕಾಲೇ, ಸಕಲಾ, ಮಹೀ ಭೂಮಿಃ, ಶಾಕ್ಯ ಶಾಸ್ತ್ರೇಣ ಬೌದ್ಧ ಶಾಸ್ತ್ರೇಣ, ವಿಸ್ತೃತಾ ವ್ಯಾಪ್ತಾಽಭೂತ್। ಪ್ರಸೃತೇತ್ಯಪಿ ಪಾಠಃ। ತತೋಬೌದ್ಧಶಾಸ್ತ್ರಾತ್, ವೈದಿಕಾ ವೇದೋಕ್ತಾ ಆಶ್ರಮಾ ಬ್ರಹ್ಮಚರ್ಯದಯೋ ಧರ್ಮಾಗುರುಕುಲ ವಾಸಾಗ್ನಿ ಹೋತ್ರ ವನವಾಸ ಪ್ರಣವ ಜಪಾದಯಶ್ಚ ಆದಯೋಽಯಸ್ಯ ತಸ್ಯ ಧರ್ಮಜ್ಞಾನಾದೇಃ, ಪರಾಭೂತಿ ಸ್ತಿರಸ್ಕಾರಃ, ಅಭೂತ್ ॥೨೯॥

**ತತ್ಕಾಲೇ ಶಾಕ್ಯ ಶಾಸ್ತ್ರೇಣ ವಿಸ್ತೃತಾ ಸಕಲಾ ಮಹೀ।**
**ವೈದಿಕಾಶ್ರಮ ಧರ್ಮಾದೇಃ ಪರಾಭೂತಿರಭೂತ್ತತಃ ॥೨೯॥**

ಅರ್ಥ:– ಕಥಾಂತರವನ್ನು ಹೇಳುತ್ತಾರೆ – ತತ್, ಕಾಲೇ = ಆ (ಮಣಿಮಂತನು ಉದ್ಭವಿಸಲು ನಿಶ್ಚಯಿಸಿದ) ಕಾಲದಲ್ಲಿ ಸಕಲಾ = ಸಮಸ್ತವಾದ ಮಹೀ = ಭೂಮಿಯು ಶಾಕ್ಯ ಶಾಸ್ತ್ರೇಣ = ಬೌದ್ಧಶಾಸ್ತ್ರದಿಂದ ವಿಸ್ತೃತಾ = ವ್ಯಾಪ್ತವು ಅಭೂತ್ = ಆಯಿತು । ತತಃ = ಬೌದ್ಧ ಶಾಸ್ತ್ರದ ದೆಸೆಯಿಂದ, ವೈದಿಕ, ಆಶ್ರಮ, ಧರ್ಮ, ಆದೇಃ = ವೇದೋಕ್ತಗಳಾದ (ಬ್ರಹ್ಮಚರ್ಯಾದಿ) ಆಶ್ರಮಗಳು

(ಗುರುಕುಲವಾಸಾದ್ಯಾಶ್ರಮ) ಧರ್ಮಗಳು - ಇವುಗಳು ಮೊದಲಾಗಿವುಳ್ಳುದಕ್ಕೆ ಪರಾಭೂತಿಃ = ತಿರಸ್ಕಾರವು ಅಭೂತ್ = ಆಯಿತು ॥೨೯॥

ಪರಾಭೂತ ಪ್ರಕಾರ ಮಾಹ- ಇಂದ್ರಜಾಲೈ ರಿತಿ॥ ಸೌಗತಾ ಬೌದ್ಧಾಃ, ಪ್ರಭುಂತ ದ್ದೇಶಾಧಿಪಂ, ರಾಜಾನಂ, ಇಂದ್ರಜಾಲೈ ರವಿದ್ಯಮಾನ ವಸ್ತುಪ್ರದರ್ಶನಾದಿಭಿರ್ವೋಃಹಕ್ತ್ರೈಃ, ವಶೀಕೃತ್ಯ, ಶೂನ್ಯಂ, ತತ್ವಮನೋರೋಪಿತಂವಸ್ತು, ಇತಿ, ಸಂಶ್ರಾವ್ಯ ಉಪದಿಶ್ಯಚ, ತೇನ ರಾಜ್ಞಾಪ್ರಯೋಜಕಕರ್ತ್ರಾ, ಸತಸ್ಸಜ್ಜನಾನ್, ಉದಸಾದಯನ್ ಉತ್ಸಾದಿತ ವಂತಃ। ಸೌಗತಃ ಪ್ರಭುರಿತಿ ಪಾಠೇ ಪ್ರಭು ಸ್ಸಮರ್ಥಃ ಸೌಗತಃ ಬೌದ್ಧಾಚಾರ್ಯ ಸ್ಸತಸ್ಸಜ್ಜನಾನುದ ಸಾದಯದಿತಿ ವ್ಯಾಖ್ಯೇಯಮ್। ಸೌಗತ ಮಿತಿ ಪಾಠೇತು ರಾಜ ವಿಶೇಷಣ ಮಿದಮ್ ॥ ಸುಗತ ದೇಶಾಧಿಪ ಮಿತ್ಯರ್ಥಃ ॥೩೦॥

**ಇಂದ್ರ ಜಾಲೈರ್ವಶೀಕೃತ್ಯ ರಾಜಾನಂ ಸೌಗತಾಃ ಪ್ರಭುಮ್ ।**
**ಶೂನ್ಯಂ ತತ್ವಂಚ ಸಂಶ್ರಾವ್ಯ ಸತಸ್ತೇನೋದಸಾದಯನ್ ॥೩೦॥**

ಅರ್ಥ:- ತಿರಸ್ಕಾರ ಪ್ರಕಾರವನ್ನು ಹೇಳುತ್ತಾರೆ. ಸೌಗತಾಃ = ಬೌದ್ಧರು ಪ್ರಭುಂ = (ಆ ದೇಶಕ್ಕೆ) ಅಧಿಪತಿಯಾದ ರಾಜಾನಂ = ಅರಸನನ್ನು ಇಂದ್ರಜಾಲೈಃ = ಇಂದ್ರಜಾಲವಿ ದ್ಯೆಗಳಿಂದ ವಶೀಕೃತ್ಯ = ಸ್ವಾಧೀನ ಮಾಡಿಕೊಂಡು ಶೂನ್ಯಂ = ಶೂನ್ಯವೇ ತತ್ವಂ = ಅನಾರೋಪಿತ ವಸ್ತುವು (ಇತಿ=ಹೀಗೆಂತೆಂದು) ಸಂಶ್ರಾವ್ಯಚ = ಉಪದೇಶ ಮಾಡಿಯೂನು ತೇನ = ಆರಾಜನಿಂದ ಸತಃ = ಸಜ್ಜನರನ್ನು ಉದಸಾದಯನ್ = ಉತ್ಸಾದನಮಾಡಿಸಿದರು (ಬಾಧಿಸಿ ಧರ್ಮಭ್ರಷ್ಟರನ್ನು ಮಾಡಿಸಿದರೆಂತ ಭಾವ ॥೩೦॥

ಬೌದ್ಧೋತ್ಸಾದ ನಂವಕ್ತುಮುಪೋದ್ಘಾತ ತಯಾ ಕಥಾಂತರ ಮಾಹಿ ತತ ಇತಿ॥ ತತಃ ಅನಂತರಂ, ಗೋವಿಂದ ಇತಿ ನಾಮ ಯಸ್ಯ ಸಃ, ವಿದ್ಯಾಸು ವೇದಾದಿಷು ವಿಶಾರದಃ ಪಂಡಿತಃ, ದ್ವಿಜೋ ವಿಪ್ರಃ, ಅಭೂತ್। ಸಗೋವಿಂದಃ ಚತುರ್ವರ್ಣೇಷು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರೇಷು ಜಾತಾಃ, ಕನ್ಯಾಃ, ಊಢ್ವಾವಿವಾಹ್ಯ, ಪುತ್ರಾನ್, ಅಜೀಜನತ್ ಉತ್ಪಾದಿತವಾನ್। ಜನಿ ಪ್ರಾದುರ್ಭಾವೇ ಧಾ. ಣಿಜಂತಃ ಕರ್ತರಿ ಲುಙ್. ಪರ. ಪ್ರ. ಏ. ॥೩೧॥

**ತತೋ ಗೋವಿಂದ ನಾಮ್ನಾಭೂ ದ್ವಿಜೋ ವಿದ್ಯಾವಿಶಾರದಃ ।**
**ಸ ಚತುರ್ವರ್ಣಜಾಃ ಕನ್ಯಾ ಊಢ್ವಾಪುತ್ರಾ ನಜೀ ಜನತ್ ॥೩೧॥**

ಅರ್ಥ:- ಕಥಾಂತರವನ್ನು ಹೇಳುತ್ತಾರೆ - ತತಃ = ಅನಂತರದಲ್ಲಿ ಗೋವಿಂದ, ನಾಮ್ನಾ = ಗೋವಿಂದ ಭಟ್ಟನೆಂತ, ಹೆಸರುವುಳ್ಳಂಥಾ ವಿದ್ಯಾ, ವಿಶಾರದಃ = ವೇದಾದಿವಿದ್ಯೆಗಳಲ್ಲಿ ಪಂಡಿತನಾದ ದ್ವಿಜಃ = ಬ್ರಾಹ್ಮಣನು ಅಭೂತ್ = ಇದ್ದನು । ಸಃ = ಆ ಗೋವಿಂದ ಭಟ್ಟನು ಚತುರ್ವರ್ಣ, ಜಾಃ = (ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರಾಖ್ಯವಾದ) ನಾಲ್ಕುವರ್ಣಗಳಲ್ಲಿ, ಹುಟ್ಟಿದವರಾದ ಕನ್ಯಾಃ = (ನಾಲ್ಕು) ಕನ್ಯಕೆಯರನ್ನು ಊಢ್ವಾ = ವಿವಾಹ ಮಾಡಿಕೊಂಡು ಪುತ್ರಾನ್ = ಮಕ್ಕಳನ್ನು ಅಜೀಜನತ್ = ಉತ್ಪಾದನ ಮಾಡಿದನು ॥೩೧॥

ಪುತ್ರಾಣಾಂ ನಾಮಾನ್ಯಾಹ-ಶಬರಇತಿ॥ ಶಬರಃ, ವಿಕ್ರಮಾದಿತ್ಯಃ, ಹರಿಶ್ಚಂದ್ರಃ ಅಥ ಸರ್ವೇಭ್ಯೋಽ ನಂತರಂ, ಭರ್ತೃಹಾ ಭರ್ತೃಹರಿಃ ಭರ್ತೃ ಹೃದಿತ್ಯ ಪಿಪಾಠಃ। ಇತ್ಯೇತೇ ಕ್ರಮಾ ದ್ಬ್ರಾಹ್ಮಣ್ಯಾ ದಿಷು ಜಾತಾಃ ಪುತ್ರಾಃ ಧೃತಾನಿಗೃಹೀತಾನಿ ವರ್ಣಾನಾಂ ಬ್ರಾಹ್ಮಣಾ ದೀನಾಮಾಶ್ರಮಾಣಾಂ, ಬ್ರಹ್ಮಚರ್ಯಾದೀನಾಂಚ ವ್ರತಾನಿಯೈಸ್ತೇ, ಕೋವಿದಾಃ ಪಂಡಿತಾಃ, ಆಸನ್ ಅಭವನ್॥ ಅಸುಭುವಿ ಧಾ.ಅಕ. ಕರ್ತರಿ ಲಙ್.ಪ್ರ.ಬ. ॥೩೨॥

**ಶಬರೋವಿಕ್ರಮಾದಿತ್ಯೋ ಹರಿಶ್ಚಂದ್ರೋಥ ಭರ್ತೃಹಾ।**
**ಇತ್ಯೇತೇ ಕೋವಿದಾ ಆಸನ್ ಧೃತ ವರ್ಣಾಶ್ರಮ ವ್ರತಾಃ ॥೩೨॥**

ಅರ್ಥ:- ಆ ಮಕ್ಕಳುಗಳ ಹೆಸರುಗಳನ್ನು ಹೇಳುತ್ತಾರೆ - ಶಬರಃ = ಶಬರನು ವಿಕ್ರಮಾದಿತ್ಯಃ = ವಿಕ್ರಮಾರ್ಕನು ಹರಿಶ್ಚಂದ್ರಃ = ಹರಿಶ್ಚಂದ್ರನು ಅಥ (ಸರ್ವರ) ಅನಂತರದಲ್ಲಿ ಭರ್ತೃಹಾ = ಭರ್ತೃಹರಿಯು ಇತಿ = ಹೀಗೆಂಬುವ ಏತೇ = (ಕ್ರಮದಿಂದ ಬ್ರಾಹ್ಮಣಾದಿ ಸ್ತ್ರೀ ಜನಿತರಾದ) ಈ ಪುತ್ರರು ಧೃತ, ವರ್ಣ, ಆಶ್ರಮ, ವ್ರತಾಃ = ಧರಿಸಲ್ಪಟ್ಟಂಥಾ ಬ್ರಾಹ್ಮಣಾದಿ ವರ್ಣಗಳು, ಬ್ರಹ್ಮ ಚರ್ಯಾದ್ಯಾಶ್ರಮಗಳು - ಇವುಗಳ, ನಿಯಮಗಳು ಉಳ್ಳಂಥಾ ಕೋವಿದಾಃ = ಪಂಡಿತರು ಆಸನ್ = ಆದರು ॥೩೨॥

ಗೋವಿಂದ ಇತಿ॥ ಗೋವಿಂದಃ, ದಾರಾಃ ಭಾರ್ಯಾಃ ಪುತ್ರಾಶ್ಚ ಆದ್ಯಾಯಸ್ಯ ಗೃಹಾದೇ ಸ್ತತ್, ವಿಹಾಯತ್ಯಕ್ತ್ವಾ, ಮಹೀಂಭೂಮಿಂ, ಅಚಾರಯತ್ ಸಂಚಾರಂ ಕೃತವಾನ್। ಚರಗತಿ ಭಕ್ಷಣಯೋರಿತ್ಯತಃ ಸ್ವಾರ್ಥೇಣಿ ಚಿಲಙ್ ಪರಸ್ಮೈಪದಮ್॥

ವಿಹಾಯಾಥ ಚರನ್ಮಹೀಮಿತ್ಯಪಿ ಪಠಂತಿ। ಶಬರಃ ತನ್ನಾಮಾ ಬ್ರಾಹ್ಮಣೀಪುತ್ರಃ, ರಹೌ ವಿಜನೇ, ಜೈಮಿ ನೇರ್ವ್ಯಾಸ ಶಿಷ್ಯಸ್ಯತನ್ನಾಮ್ನ ಋಷೇಃ, ಸೂತ್ರಾಣಾಂ ಕರ್ಮಮೀಮಾಂಸಾ ಪರಾಣಾಂ, ಭಾಷ್ಯಂ, "ಸೂತ್ರಾರ್ಥೋ ವರ್ಣ್ಯತೇ ಯತ್ರ ಪದೈ ಸೂತ್ರಾನು ಕಾರಿಭಿಃ। ಸ್ವಪದಾನಿ ಚ ವರ್ಣ್ಯಂತೇ ಭಾಷ್ಯಂ ಭಾಷ್ಯವಿದೋವಿದುಃ" ಇತ್ಯುಕ್ತಲಕ್ಷಕಂ ವ್ಯಾಖ್ಯಾನ ಗ್ರಂಥಂ, ವ್ಯಧತ್ತ ಕೃತವಾನ್ । ರುಧಾಞ್ ಧಾರಣ ಪೋಷಣಯೋಃ- ಧಾ.ಸಕ.ಕರ್ತರಿ ಲಙ್ ಆತ್ಮ.ಪ್ರ. ಏ. ॥೩೩॥

**ಗೋವಿಂದೋ ದಾರಪುತ್ರಾದ್ಯಂ ವಿಹಾಯಾಚಾರಯನ್ಮಹೀಮ್।**
**ವ್ಯಧತ್ತಶಬರೋ ಭಾಷ್ಯಂ ಸೂತ್ರಾಣಾಂ ಜೈಮಿನೇರಹಃ ॥೩೩॥**

ಅರ್ಥ:- ಗೋವಿಂದಃ = ಗೋವಿಂದ ಭಟ್ಟನು ದಾರ, ಪುತ್ರ, ಆದ್ಯಂ = ಹೆಂಡತಿಯರು, ಮಕ್ಕಳು ಇವರು, ಮೊದಲಾಗಿವುಳ್ಳವರನ್ನು ವಿಹಾಯ = ಬಿಟ್ಟು ಮಹೀಂ = ಭೂಮಿಯನ್ನು ಅಚಾರಯತ್ = ಸಂಚರಿಸಿದನು । ಶಬರಃ = (ಬ್ರಾಹ್ಮಣ ಸ್ತ್ರೀ ಪುತ್ರನಾದ) ಶಬರನು ರಹಃ = ಏಕಾಂತ ಸ್ಥಲದಲ್ಲಿ (ಬೌದ್ಧರಿಗೆ ತಿಳಿಯದೆ ಇರುವ ಹಾಗೆ ಎಂತ ಭಾವ) ಜೈಮಿನೇಃ = (ವೇದವ್ಯಾಸ ಶಿಷ್ಯದಾದ) ಜೈಮಿನ್ಯಾಚಾರ್ಯರ ಸೂತ್ರಣಾಂ = (ಕರ್ಮಮೀಮಾಂಸನಾ ಪರವಾದ) ಸೂತ್ರಗಳಿಗೆ ಭಾಷ್ಯಂ = ಭಾಷಾಖ್ಯವ್ಯಾಖ್ಯಾನ ಗ್ರಂಥವನ್ನು ವ್ಯಧತ್ತ = ಮಾಡಿದನು ॥೩೩॥

ಕ್ಷ್ಮಾಮಿತಿ॥ ವಿಕ್ರಮಾದಿತ್ಯ ಸ್ತನ್ನಾಮಕಃ ಕ್ಷತ್ರಿಯ ಕನ್ಯಾಪುತ್ರಃ. ಕ್ಷ್ಮಾಂ ಭೂಮಿಂ, ಅಪಾತ್ ಅರಕ್ಷತ್। ಪಾರಕ್ಷಣೇ- ಧಾ.ಸಕ. ಕರ್ತರಿ ಲಙ್ ಪರ. ಪ್ರ. ಏ.। ಹರಿಶ್ಚಂದ್ರ ಏತದಾಖ್ಯೋ ವೈಶ್ಯಕ ನ್ಯಾಜಃ, ಸುರೋತ್ತಮಾನ್ ದೇವಶ್ರೇಷ್ಠಾನ್, ಇಷ್ಟ್ವಾಯ ಜ್ಞೇನ ಸಂತೋಷ್ಯ, ತೇಭ್ಯಃ ಆಯುರ್ವೇದ ವೈದ್ಯಶಾಸ್ತ್ರವ ಶಿತಾಂ ಸ್ವಾತಂತ್ರ್ಯ ಲಕ್ಷಣಂ, ಪರಮುತ್ತಮಂ, ವರಂಪ್ರಸಾದಂ ಅಲಭಿಷ್ಟ ಪ್ರಾಪ್ತವಾನ್। ಡುಲಭಷ್ ಪ್ರಾಪಿತೌ- ಧಾ.ಸಕ. ಕರ್ತರಿ ಲುಙ್.ಆತ್ಮ.ಪ್ರ.ವ ॥೩೪॥

**ಕ್ಷ್ಮಾಮ ಪಾದ್ವಿಕ್ರಮಾದಿತ್ಯೋ ಹರಿಶ್ಚಂದ್ರ ಸ್ಸುರೋತ್ತಮಾನ್।**
**ಇಷ್ಟ್ವಾಽಽಯುರ್ವೇದ ವಶಿತಾ ಮಲಭಿಷ್ಟ ಪರಂಪರಂ ॥೩೪॥**

ಅರ್ಥ:- ವಿಕ್ರಮಾದಿತ್ಯಃ = (ಕ್ಷತ್ರಿಯ ಸ್ತ್ರೀ ಪುತ್ರನಾದ) ವಿಕ್ರಮಾರ್ಕನು ಕ್ಷ್ಮಾಂ ಭೂಮಿಯನ್ನು ಅಪಾತ್ = ರಕ್ಷಿಸಿದನು ॥ ಹರಿಶ್ಚಂದ್ರಃ = (ವೈಶ್ಯಸ್ತ್ರೀ ಪುತ್ರನಾದ)

ಹರಿಶ್ಚಂದ್ರನು. ಸುರೋತ್ತಮಾನ್ = ದೇವ ಶ್ರೇಷ್ಠರನ್ನು ಇಷ್ಟ್ವಾ = ಯಜ್ಞದಿಂದ ಸಂತೋಷಪಡಿಸಿ (ತೇಭ್ಯಃ = ಆ ದೇವತೆಗಳ ಕಡೆಯಿಂದ) ಆಯುರ್ವೇದ, ವಶಿತಾಂ = ವೈದ್ಯಶಾಸ್ತ್ರದಲ್ಲಿ ಸ್ವಾತಂತ್ರ್ಯ ರೂಪವಾದ (ಅಪ್ರತಿಹತ ಪಾಂಡಿತ್ಯ ರೂಪವಾದ) ಪರಂ = ಉತ್ತಮವಾದ ವರಂ = ವರವನ್ನು ಅಲಭಿಷ್ಟ = ಹೊಂದಿದನು ॥೩೪॥

ಗತ್ವೇತಿ॥ ಸಭರ್ತೃಹರಿ ಸ್ತನ್ನಾಮಕಃ ಶೂದ್ರಾ ಪುತ್ರಃ, ಯಜ್ಞಭುವಂ ಬ್ರಾಹ್ಮಣಾಧಿಷ್ಠಿತ ಯಜ್ಞಸ್ಥಲಂ, ಗತ್ವಾ, ವಿಪ್ರೈರ್ಬ್ರಾಹ್ಮಣೈರನು ಮೋದಿತಸ್ಸನ್, ಶೂದ್ರತ್ವೇನ ಸ್ವತೋಽಧಿಕಾರಾ ಭಾವೇನ ವಿಪ್ರಾಜ್ಞಾನುಜ್ಞಾವಶ್ಯಕ ತೇತಿಭಾವಃ। ಯಜ್ಞಸ್ಯಹೃದಯಂ ಅಭಿಪ್ರಾಯಂ, ವಿಚಾರ್ಯ ಇಮಾಂ ಮಹೀಂಭೂಮಿಂ, ಚಚಾರ। ಚರಗತಿ ಭಕ್ಷಣಯೋಃ- ಧಾ.ಸಕ.ಕರ್ತರಿ.ಲಿಟ್. ಪರ. ಪ್ರ.ಏ ॥೩೫॥

**ಗತ್ವಾಯಜ್ಞಭುವಂ ಭರ್ತೃಹರಿರ್ವಿಪ್ರಾನು-ಮೋದಿತಃ ।**
**ವಿಚಾರ್ಯ ಯಜ್ಞಹೃದಯಂ ಸ ಚಚಾರಮಹೀಮಿಮಾಮ್ ॥೩೫॥**

ಅರ್ಥ:- ಸಃ = ಅಂಥಾ ಭರ್ತೃಹರಿಃ = (ಶೂದ್ರ ಸ್ತ್ರೀಪುತ್ರನಾದ) ಭರ್ತೃ ಹರಿಯು ಯಜ್ಞ, ಭುವಂ = (ಬ್ರಾಹ್ಮಣರು ಮಾಡುತ್ತಿದ್ದ) ಯಜ್ಞದ, ಸ್ಥಲವನ್ನು ಗತ್ವಾ = ಹೊಂದಿ ವಿಪ್ರ ಅನುಮೋದಿತಃ (ಸನ್) = (ಶೂದ್ರನಾದ ಕಾರಣ ಸ್ವತಂತ್ರವಾಗಿ ಅಧಿಕಾರವಿಲ್ಲದವನಾದ ಪ್ರಯುಕ್ತ) ಬ್ರಾಹ್ಮಣರಿಂದ ಆಜ್ಞಪ್ತನಾಗಿ ಯಜ್ಞ, ಹೃದಯಂ = ಯಜ್ಞದ ಅಭಿಪ್ರಾಯವನ್ನು ವಿಚಾರ್ಯ = ವಿಚಾರ ಮಾಡಿ ಇಮಾಂ = ಈ ಮಹೀಂ = ಭೂಮಿಯನ್ನು ಚಚಾರ = ಸಂಚರಿಸಿದನು ॥೩೫॥

ಆರ್ಯಸ್ಯೇತಿ॥ ವೇದವಿದುಷಃ ವೇದಜ್ಞಸ್ಯ, ಆರ್ಯಸ್ಯ ಗೋವಿಂದಭಟ್ಟ ಪುತ್ರೇಷು ಚತುರ್ಷು ಜ್ಯೇಷ್ಠಸ್ಯ ಶಬರಸ್ಯ, ಉಭೌದ್ವೌ, ತನಯಾ ಸುತೌ, ಪ್ರಾಭೂತಾಂ ಜಾತೌ। ಭಟ್ಟಕುಮಾರಃ, ತನ್ನಾಮಾ, ತಯೋರ್ಮಧ್ಯೇ ಪ್ರಥಮೋ ಜ್ಯೇಷ್ಠಃ। ಭಟ್ಟನಾರಾಯಣಃ ಪರೋಽನಂತರಜಃ ॥೩೬॥

**ಆರ್ಯಸ್ಯ ವೇದವಿದುಷಃ ಪ್ರಾಭೂತಾಂ ತನಯಾವುಭೌ।**
**ಭಟ್ಟಃ ಕುಮಾರಃ ಪ್ರಥಮೋ ಭಟ್ಟನಾರಾಯಣಃ ಪರಃ ॥೩೬॥**

ಅರ್ಥ:- ವೇದ, ವಿದುಷಃ = ವೇದವನ್ನು ತಿಳಿದವನಾದ ಆರ್ಯಸ್ಯ = ಹಿರಿಯವನಾದ ಶಬರಗೆ ಉಭೌ = ಇಬ್ಬರಾದ ತನಯೌ = ಪುತ್ರರು ಪ್ರಾಭೂತಾಂ = ಹುಟ್ಟಿದರು।

ಭಟ್ಟಃ ಕುಮಾರಃ = ಭಟ್ಟಕುಮಾರನು ಪ್ರಥಮಃ = (ಆ ಪುತ್ರರಲ್ಲಿ) ಮೊದಲನೆಯವನು ಭಟ್ಟನಾರಾಯಣಃ = ಭಟ್ಟನಾರಾಯಣನು ಪರಃ = ಅನಂತರದಲ್ಲಿ ಹುಟ್ಟಿದನು ॥೩೬॥

ಕುಮಾರಇತಿ॥ ತದಾಬೌದ್ಧಮತ ಪ್ರಚಾರಕಾಲೇ, ಧರ್ಮಸಂಕಟೇ ವರ್ಣಾಶ್ರಮ ಧರ್ಮ ಲೋಪರೂಪ ಕ್ಲೇಶೇ, ಸಂಪ್ರಾಪ್ತೇ ಸತಿ, ಕುಮಾರೋ ಭಟ್ಟ ಕುಮಾರಃ, ನಾರಾಯಣೇನಸ್ವಾನು ಜೇನ, ಸಂಮಂತ್ರ್ಯ ಬೌದ್ಧಶಾಸ್ತ್ರ ಪ್ರಚಾರೇಣಾಸ್ತಿಕಮತ್ತಂ ಪ್ರಲುಪ್ತಂ, ತದುಜ್ಜೀವನಾಯ, ಬೌದ್ಧಶಾಸ್ತ್ರ ದೂಷಣಮಾವಶ್ಯಕಂ, ತದ್ದೂಷಣಂ ಚತಜ್ಞಾನಂ ವಿನಾನ ಸಂಭವತೀತಿ ಬೌದ್ಧ ಶಾಸ್ತ್ರಾಧಿಗತಿ ರಾವಶ್ಯಕೀತ್ಯಾಲೋಚ್ಯ, ತನ್ಮತಸ್ಯ ಬೌದ್ಧಮತಸ್ಯ ವಿತ್ತಯೇ ಜ್ಞಾನಾಯ, ಬೌದ್ಧಂ ಬೌದ್ಧಮತಾನುತಯಾಯಿನಂ ಕಂಚಿದಾಚಾರ್ಯಂ ಭಜೇಸಿಷೇವೇ। ಭಜಸೇವಾಯಾಂ – ಧಾ.ಸಕ.ಕರ್ತರಿಲಟ್. ಆತ್ಮ.ಪ್ರ.ಏ. ॥೩೭॥

**ಕುಮಾರಸ್ತು ತದಾ ಭೇಜೇ ಬೌದ್ಧಂ ತನ್ಮತವಿತ್ತಯೇ ॥**
**ನಾರಾಯಣೇನ ಸಂಮಂತ್ರ್ಯ ಸಂಪ್ರಾಪ್ತೇ ಧರ್ಮಸಂಕಟೇ ॥೩೭॥**

ಅರ್ಥ:– ತದಾ = ಬೌದ್ಧಮತ ಪ್ರಚಾರ ಕಾಲದಲ್ಲಿ ಧರ್ಮ, ಸಂಕಟೇ = ವರ್ಣಾಶ್ರಮ ಧರ್ಮಗಳಿಗೆ; ಲೋಪರೂಪವಾದ ಸಂಕಟವು ಸಂಪ್ರಾಪ್ತೇ (ಸತಿ) = ಬರುತ್ತಿರಲಾಗಿ ಕುಮಾರಸ್ತು = ಭಟ್ಟಕುಮಾರನಾದರೆ ನಾರಾಯಣೇನ = (ತನ್ನ ತಮ್ಮನಾದ) ನಾರಾಯಣ ಭಟ್ಟನಿಂದ ಸಂಮಂತ್ರ್ಯ = (ವರ್ಣಾಶ್ರಮ ಧರ್ಮಗಳಿಗೆ ಲೋಪಕಾರಣವಾದ ಬೌದ್ಧಶಾಸ್ತ್ರದ ದೂಷಣಾರ್ಥವಾಗಿ ಬೌದ್ಧ ಶಾಸ್ತ್ರದ ಅಭ್ಯಾಸವು ಆವಶ್ಯಕವೆಂತ) ಆಲೋಚಿಸಿ ತನ್ಮತ, ವಿತ್ತಯೇ = ಆಬೌದ್ಧ ಶಾಸ್ತ್ರದ, ಜ್ಞಾನಕ್ಕೋಸ್ಕರ ಬೌದ್ಧಂ = ಬೌದ್ಧ ಮತಸ್ಥನಾದ ಒಬ್ಬ ಆಚಾರ್ಯನನ್ನು ಭೇಜೇ = ಸೇವಿಸಿದನು ॥೩೭॥

ಪ್ರಾಸಾದೇತಿ॥ ಅಥಬೌದ್ಧಾಚಾರ್ಯೋಪಸತ್ತಿಪ್ರಾರಂಭಾನಂತರಂ, ಪ್ರಾಸಾದಸ್ಯ ಗೃಹಸ್ಯೋಪರಿ ನಿಬದ್ಧ ಗೃಹಸ್ಯಾಗ್ರೇ, ಅಭ್ಯಂಜ ಯಿತಾ ಗುರೋಃಶ್ಶಿರಿಸಿ ತೈಲವಿಲೇಪನಂ ಕರ್ವನ್, ಭಟ್ಟಃ ಭಟ್ಟ ಕುಮಾರಃ, ಶಾಕ್ಯಸ್ಯ ಬೌದ್ಧಸ್ಯ, ವೇದಸ್ಯ ವಿಪ್ಲಾವನಂ ಅಪ್ರಾಮಾಣ್ಯ ಪ್ರತಿಪಾದಿನಾದಿನಾ ದೂಷಣಂ ತಸ್ಯವ್ಯಾ ಖ್ಯಾಂ ಸಮ್ಯಕ್ಪ್ರತಿಪಾದನಂ, ಶ್ರುತ್ವಾ, ಅಶ್ರೂಣಿನೇತ್ರಾಂಬೂನಿ, ಪದೇ ಬೌದ್ಧಪಾದೇ

ನ್ಯಪಾತಯತ್॥ ಪತಲೃಗತೌ- ಧಾ.ಣಿಜಂತಃ. ಸಕ. ಕರ್ತರಿ ಲಙ್. ಪ್ರ.ಏ. ॥೩೮॥

**ಪ್ರಾಸಾದಾಗ್ರೇಥ ಶಾಕ್ಯಸ್ಯ ಭಟ್ಟೋ ಭ್ಯಂಜಯಿತಾ ಪದೇ ।**
**ವೇದ ವಿಪ್ಲಾವನ ವ್ಯಾಖ್ಯಾಂ ಶ್ರುತ್ವಾಶ್ರೂಣಿ ನ್ಯಪಾತಯತ್ ॥೩೮॥**

ಅರ್ಥ:- ಅಥ ಬೌದ್ಧಚಾರ್ಯರ ಸೇವಾರಂಭಾನಂತರದಲ್ಲಿ ಪ್ರಾಸಾದ, ಅಗ್ರೇ=ಉಪ್ಪರಿಗೆಯ, ಕೊನೆಯಲ್ಲಿ ಅಭ್ಯಂಜಯತಾ=(ಗುರಿವಿನ ಶಿರಸ್ಸಿನಲ್ಲಿ) ತೈಲ ಲೇಪನಮಾಡುತ್ತಿದಂಥಾ ಭಟ್ಟಃ=ಭಟ್ಟಕುಮಾರನು ಶಾಕ್ಯಸ್ಯ=ಬೌದ್ಧಾಚಾರ್ಯರ ವೇದ, ವಿಪ್ಲಾವನ, ವ್ಯಾಖ್ಯಾಂ=ವೇದಕ್ಕೆ, ಅಪ್ರಾಮಾಣ್ಯ ಕಥನಾದಿ ದೂಷಣದ ಪ್ರವಚನವನ್ನು ಶ್ರುತ್ವಾ=ಕೇಳಿ ಅಶ್ರೂಣಿ=ನೇತ್ರೋದಕಗಳನ್ನು ಪದೇ=(ಬೌದ್ಧಾಚಾರ್ಯರ) ಪಾದದಲ್ಲಿ ನ್ಯಪಾತಯತ್=ಸುರಿಸಿದನು ॥೩೮॥

ತದಿತಿ॥ ಸಬೌದ್ಧಾಚಾರ್ಯಃ, ತೇಷಾ ಮಶ್ರೂಣಾ ಮುಷ್ಣಿ ಮಾ ಉಷ್ಣತ್ವ ಮೇವ ಅನುಮಾನಂ ವ್ಯಾಪ್ತಿ ಸಮುಚಿತ ದೇಶ ವೃತ್ತಿತ್ವಾದಿ ಯುಕ್ತಂ ಲಿಂಗಂ ತೇನ, ವಿಪ್ರಸ್ಯ ಭಟ್ಟಕುಮಾರಸ್ಯ, ಆಧೀ ವೇದ ವಿಪ್ಲಾವನ ಶ್ರವಣ ಜನಿತಾಂ ಮಾನಸ ವ್ಯಥಾಂ, ಅಬೋಧಿ ಜ್ಞಾತವಾನ್। ಬುಧ್ಧ ಅವಗಮನೇ ಇತ್ಯತಃ ಕರ್ತರಿ ಲುಙ್ ।ಸೂ। ದೀಪಜನ ಬುಧ ಪೂರಿತಾಯಿ ಭ್ಯೋಽನ್ಯ ಕರ ಸ್ಯಾಮಿತಿ ಚಿಣಾದೇಶೇ ಸೂ। ಚಿಣೋಲುಗಿ ತಿಲುಜಾ ದೇಶತ ಕಾರಸ್ಯಲು ಕೀದಂ ರೂಪಂ ಬೋಧ್ಯಮ್। ಆಧಿಂ ವಿಬುಧ್ಯಸ ಇತ್ಯಪಿ ಪಾಠಃ। ಅಯಮತ್ರ ಪ್ರಯೋಗಃ – ಅಯಂಭಟ್ಟೋ ವೇದದೂಷಣ ಶ್ರವಣೇನ ದುಃಖಾತಿ ರೇಕವಾನ್ ಭವಿತು ಮರ್ಹತಿ, ಏತ ತ್ಕಾಲೇ ಅಶ್ರು ವಿಶೇಷ ಮೋಚಕ ಪುರುಷ ವದಿತಿ। ಅಧಿಜ್ಞಾನ ಫಲಂ ವಕ್ತಿ- ಹನ್ಯತಾಮಿತಿ। ಏಷಪುರೋವರ್ತೀ ಭಟ್ಟಕುಮಾರಃ ಛದ್ಮಕ ಪಟಂ ಆತ್ಮನಿ ಮನಿಸಿಯಸ್ಯ ಸತಾದೃಶಃ ಸ್ವೀಯಮಾಸ್ತಿಕತ್ವಂ ಕಪಟೇನಾಚ್ಛಾದಯ ತೀತಿಭಾವಃ। ಅತೋ ಹನ್ಯತಾಂಹನ್ಯತಾಂ, ಭವದ್ಭಿರಿತಿ ಶೇಷಃ। ಹನನಾ ದರಾದ್ವಿರುಕ್ತಿಃ। ಇತ್ಯೇವಂ, ಜಗಾದಚ, ಸ್ವಶಿಷ್ಯಾನ್ಪ್ರತೀತಿಶೇಷಃ। ಹನಹಿಂಸಾಗತ್ಯೋಃ- ಧಾ.ಸಕ.ಕರ್ಮಣಿ. ಲೋಟ್. ಆತ್ಮ ಪ್ರ. ಏ.। ಗದವ್ಯ ಕ್ತಾಯಾಂವಾಚಿ- ಸಕ. ಕರ್ತರಿಲಿಟ್. ಪರ. ಪ್ರ. ಏ ॥೩೯॥

**ತದುಷ್ಣಿಮಾನುಮಾನೇನ ವಿಪ್ರಸ್ಯಾಧಿಮಭೋಧಿ ಸಃ।**
**ಹನ್ಯತಾಂ ಹನ್ಯತಾಮೇಷ ಛದ್ಮಾತ್ಮೇತಿ ಜಗಾದ ಚ ॥೩೯॥**

ಅರ್ಥ:- ಸಃ=ಆಬೌದ್ಧಾಚಾರ್ಯನು ತತ್, ಉಷ್ಣಿಮ, ಅನುಮಾನೇನ= ಆನೇತ್ರೋದಕಗಳ ಉಷ್ಣತ್ವವೆಂಬ ಅನುಮಾಪಕವಾದ ಹೇತುವಿನಿಂದ ವಿಪ್ರಸ್ಯ= ಬ್ರಾಹ್ಮಣನಾದ ಭಟ್ಟಕುಮಾರನ ಆಧಿಂ=(ವೇದ ದೂಷಣಶ್ರವಣದಿಂದ ವುಂಟಾದ) ಮನೋವ್ಯಥೆಯನ್ನು ಅಬೋಧಿ = ತಿಳಿದುಕೊಂಡನು. ಏಷಃ = ಈ ಭಟ್ಟಕುಮಾರನು ಛದ್ಮ, ಆತ್ಮಾ = (ತನ್ನ ಆಸ್ತಿಕ ವೇಷವನ್ನು ಆಚ್ಛಾದಿಸುವ) ಕಪಟವು, ಮನಸ್ಸಿನಲ್ಲಿವುಳ್ಳವನು. (ಆದ ಕಾರಣದ ದೆಸೆಯಿಂದ) (ಭವದ್ಭಿಃ = ನಿಮ್ಮಿಂದ) ಹನ್ಯತಾಂ ಹ ನ್ಯತಾಂ = ಸಂಹರಿಸಲ್ಪಡಲಿ ಸಂಹರಿಸಲ್ಪಡಲಿ ಇತಿ = ಈ ಪ್ರಕಾರವಾಗಿ (ಸ್ವಶಿಷ್ಯಾನ್ಪ್ರತಿ = ತನ್ನ ಶಿಷ್ಯರನ್ನು ಕುರಿತು) ಜಗಾದಚ = ಮಾತನ್ನೂ ಆಡಿದನು ॥೩೬॥

ತದಾನೀಮಿತಿ॥ ತದಾನೀಂ, ಅಸ್ಮಿನ್ ಬೌದ್ಧೇ, ಹಂತುಂ ಸ್ವಂ ಸಂಹರ್ತುಂ ಕಾಮೋಽಯಸ್ಯ ತಸ್ಮಿನ್ ಸ್ತಾದೃಶೇಸತಿ, ಭಟ್ಟಃ, ವೇದಾಃ, ಪ್ರಮಾಣಂ ಪ್ರಮಿತಿ ಜನಕಾಶ್ಚೇತ್, ಅಹಂ, ಜೀವಾಮಿ ಪ್ರಾಣತ್ಯಾಗ ಕಾರಣೀಭೂತೇ ಉನ್ನತಸ್ಥಾನಾತ್ಪತನ ರೂಪೇ ಕರ್ಮಣ್ಯಾ ಚರಿತೇಽಪಿ ಪ್ರಾಣಾನ್ ಧಾರಯಾಮಿ। ಇತ್ಯೇವಂ ವಚಃ, ಬ್ರುವನ್ನುಚರನ್ ಸನ್, ಧರಣ್ಯಾಃ ಭುವಸ್ತಲೇ ಪ್ರದೇಶೇ, ನ್ಯಪತತ್, ಪ್ರಾಸಾದಾಗ್ರಾದಿತಿತೇಷಃ। ಪದಲೃಗತೌ- ಧಾ. ಕರ್ತರಿ ಲಙ್. ಪರ. ಪ್ರ. ಏ. ॥೪೦॥

**ತದಾನೀಂ ಹಂತು ಕಾಮೇಽಸ್ಮಿನ್ ನ್ಯಪತದ್ಧರಣೀ ತಲೇ ।**
**ಭಟ್ಟೋ ವೇದಾಃ ಪ್ರಮಾಣಂ ಚೇ ಜ್ಜೀವಾಮೀತಿ ವ ಚೋ ಬ್ರುವನ್॥೪೦॥**

ಅರ್ಥ:- ತದಾನೀಂ = ಆ ಕಾಲದಲ್ಲಿ ಅಸ್ಮಿನ್ = ಈ ಬೌದ್ಧಾಚಾರ್ಯನು ಹಂತು ಕಾಮೇ (ಸತಿ) = (ತನ್ನನ್ನು) ಸಂಹರಿಸಲು, ಇಚ್ಛೆಯುಳ್ಳವನಾಗುತ್ತಿರಲಾಗಿ ಭಟ್ಟಃ = ಭಟ್ಟಕುಮಾರನು ವೇದಾಃ = ವೇದಗಳು ಪ್ರಮಾಣಂ ಚೇತ್ = ಪ್ರಮಾಣವಾದ ಪಕ್ಷದಲ್ಲಿ (ಅಹಂ=ನಾನು) ಜೀವಾಮಿ = (ಉನ್ನತ ಸ್ಥಾನದಿಂದ ಕೆಳಗೆ ದುಮಿಕಿದ ರೂನು) ಜೀವಿಸುವೆನು. ಇತಿ = ಈ ಪ್ರಕಾರವಾಗಿ ವಚಃ = ವಾಕ್ಯವನ್ನು ಬ್ರುವನ್ (ಸನ್) = ಹೇಳುವವನಾಗಿ ಧರಣಿ, ತಲೇ=ಭೂಮಿಯ, ಪ್ರದೇಶದಲ್ಲಿ ನ್ಯಪತತ್ = ಧುಮುಕಿದನು ॥೪೦॥

ಶಂಕ್ವೇತಿ॥ ತತಃ ವೇದಾಃ ಪ್ರಮಾಣಂ ಚೇದಿತಿ ವೇದ ಪ್ರಾಮಾಣ್ಯ ಸಂಶಯ ಕರಣಾತ್, ತಸ್ಯ ಭಟ್ಟಸ್ಯ, ಏಕಂ, ಚಕ್ಷುರ್ಲೋಚನಂ, ಶಂಕೋಽಸೂಕ್ಷ್ಮಾಗ್ರದಾರು

ವಿಶೇಷಸ್ಯವೇಧೇನ ಕಠಿನತರ ಸ್ಪರ್ಶೇನ, ನಷ್ಟಂ ಭಗ್ನಂ, ಅಭವತ್। ಹೇಭಟ್ಟ, ವೇದಾನಾಂ ಪ್ರಾಮಾಣ್ಯ ವಿಷಯೇ ಸಂದೇಹೋತ್ಸಂಶಯಾತ್, ತ್ವಲ, ಕಾಣ ಏಕಲೋಚನ ಹೀನಃ, ಅಸಿ। ಅಸಭುವಿ - ಧಾ. ಕರ್ತರಿ ಲಟ್. ಪರ. ಮ. ಏ.। ಇತ್ಯೇವಂ ಅಶರೀಣೇಣ ಅಸ್ಮದಾದಿ ದೇಹ ಸದೃಶ ದೇಹರತೇನ ವಾಯುದೇವೇನ ಉಚ್ಚರಿಕಾ ವಾಕ್ ವಾಣೀ, ತದಾಶ್ರುತೇತಿ ಶೇಷಃ ॥೪೧॥

**ಶಂಕುವೇಧೇನ ತಸ್ಯೈಕಂ ಚಕ್ಷುರ್ನಷ್ಟಂ ತತೋಽಭವತ್ ।**
**ವೇದ ಪ್ರಾಮಾಣ್ಯ ಸಂದೇಹಾತ್ ಕಾಣೋಽಸೀತ್ಯಶರೀರ ವಾಕ್ ॥೪೧॥**

ಅರ್ಥ:- ತತಃ = (ವೇದವು ಪ್ರಮಾಣವಾದರೆ ನಾನು ಜೀವಿಸುವೆನೆಂತ) ವೇದ ಪ್ರಾಮಾಣ್ಯ ವಿಷಯದಲ್ಲಿ ಸಂಶಯಪಟ್ಟಕಾರಣದ ದೆಸೆಯಿಂದ. ತಸ್ಯ = ಆಭಟ್ಟಕುಮಾರನ ಏಕಂ = ಒಂದಾದ ಚಕ್ಷುಃ = ನೇತ್ರವು ಶಂಕು, ವೇದೇನ = ಸೂಕ್ಷ್ಮಾಗ್ರಕಾಷ್ಠ ವಿಶೇಷದ (ಗೂಟದ) ತಾ ಕೋಣದರಿಂದ ನಷ್ಟಂ = ನಾಶವನ್ನು ಹೊಂದಿದಂಥಾದ್ದು ಅಭವತ್ = ಆಯಿತು. (ಹೇ ಭಟ್ಟ = ಎಲೈಭಟ್ಟಕುಮಾರನೇ) ವೇದ, ಪ್ರಮಾಣ್ಯ, ಸಂದೇಹಾತ್ = ವೇದದ, ಪ್ರಮಾಣತ್ವ ವಿಷಯದಲ್ಲಿ, ಸಂಶಯ ಪಡೋಣದರ ದೆಸೆಯಿಂದ (ತ್ವಂ = ನೀನು) ಕಾಣಃ = ಒಂದು ಕಣ್ಣಿಲ್ಲದವನು ಅಸಿ = ಆದಿ. ಇತಿ = ಈ ಪ್ರಕಾರವಾಗಿ ಅಶರೀರ, ವಾಕ್ = (ಅಸ್ಮದಾದಿ ಶರೀರಕ್ಕೆ ಸಮವಾದ) ಶರೀರವಿಲ್ಲದವರಾದ ವಾಯು ದೇವರ ವಾಕ್ಯವು (ತದಾ = ಆ ಕಾಲದಲ್ಲಿ ಶ್ರುತಾ = ಕೇಳಲ್ಪಟ್ಟಿತು) ॥೪೧॥

ಕದಾಚಿತಿ॥ ಕದಾಚಿತ್ ಕಸ್ಮಿಂಶ್ಚಿತ್ಕಾಲೇ ರಾಜಾ ಸೌಗತಾಧಿಷ್ಠಿತ ದೇಶಪತಿಃ, ತಂ, ಭಟ್ಟ ಕುಮಾರಂ, ರಹಃ ಏಕಾಂತಸ್ಥಲೇ ಬೌದ್ಧಜನರಹಿತಪ್ರದೇಶ ಇತ್ಯರ್ಥಃ ಸಮಾಹೂಯ ಆ ಕಾರ್ಯ, ಹೇ ದ್ವಿಜೇಂದ್ರ ಬ್ರಾಹ್ಮಣ ಶ್ರೇಷ್ಠ ಭಟ್ಟಕುಮಾರ ದೇವತಾಜನೇನ 'ವೇದ ಪ್ರಾಮಾಣ್ಯ ಸಂದೇಹಾತ್ಕಾಣೋಽಪಿ" ಇತಿವಾಕ್ಯೋಚ್ಚಾರಕೇಣ ವಾಯುದೇವೇನ ಸಂಭಾವ್ಯಂ, ತೇ ತವ, ಮತಂ, ಕಿಂಸ್ವಿತ್ ಕೀದೃಶಂ, ಇತೀದಂ, ಅಬ್ರವೀತ್। ಬ್ರೂಞ್ ವ್ಯಕ್ತಾಯಾಂ ವಾಚಿ- ಧಾ. ಸಕ. ಕರ್ತರಿ ಲಙ್.ಪರ. ಪ್ರ. ಏ ॥೪೨॥

**ಕದಾಚಿತ್ತಂ ರಹೋರಾಜಾ ಸಮಾಹೂಯೇದ ಮಬ್ರವೀತ್।**
**ದೇವತಾಜನ ಸಂಭಾವ್ಯಂ ಮತಂ ಕಿಂಸ್ವಿದ್ದ್ವಿಜೇಂದ್ರ ತೇ ॥೪೨॥**

ಅರ್ಥ:– ಕದಾಚಿತ್ = ಒಂದಾನೊಂದು ಕಾಲದಲ್ಲಿ ರಾಜಾ = (ಆದೇಶದ) ಅರಸನು. ತಂ = ಆಭಟ್ಟಕುಮಾರನನ್ನು ರಹಃ = ಏಕಾಂತದಲ್ಲಿ (ಬೌದ್ಧರಿಲ್ಲದ ಸ್ಥಳದಲ್ಲಿ ಸಮಾಹೂಯ = ಕರೆಯ ಕಳುಹಿಸಿ ಹೇದ್ವಿಜೇಂದ್ರ = ಎಲೈ ಬ್ರಾಹ್ಮಣ ಶ್ರೇಷ್ಠನಾದ ಭಟ್ಟನೇ ದೇವತಾಜನ, ಸಂಭಾವ್ಯಂ = (ಈಗ ವೇದ ಪ್ರಾಮಾಣ್ಯ ವಿಷಯದಲ್ಲಿ ಸಂಶಯಪಟ್ಟ ಕಾರಣದಿಂದ ನೀನೊಂದು ಕಣ್ಣಿಲ್ಲದವನಾದಿ ಎಂತ ವಾಕ್ಯವನ್ನು ಉಚ್ಚರಿಸಿದವರಾದ) ವಾಯುದೇವರಿಂದ ಅಥವಾ ದೇವತೆಗಳು ಜನರು ಇವರಿಂದ, ಮಾನಿಸಲರ್ಹವಾದ ತೇ = ನಿನ್ನ ಮತಂ = ಮತವು ಕಿಂಸ್ವಿತ್ = ಎಂಥಾದ್ದು ಇತೀದಂ = ಹೀಗೆಂತೆಂಬುವ ವಾಕ್ಯವನ್ನು ಅಬ್ರವೀತ್ = ಹೇಳದನು ॥೪೨॥

ಇತೀತಿ॥ ಇತ್ಯೇವಂ, ಮಹೀಭರ್ತ್ರಾರಾಜ್ಞಾ, ಉಕ್ತಃ, ಸಃ, ಭಟ್ಟಃ, ವಿಶೇಷೇಣ ಶಂಕಾ ಬೌದ್ಧೇ ಭ್ಯಸ್ತದೇಶಾಧಿಪತೇ ರ್ವಾ ಭೀತಿರಸ್ಯ ಸಂಜಾತೇತಿ ವಿಶಂಕಿ ತೋಽತ್ರಸ್ತಸ್ಸನ್, ಭವತೀತ್ಯ ತಾರಕಾದಿತ್ವಾದಿ ತಚ್। ಆ ಹಸ್ಮಜಗಾದ। ಬ್ರೂಞ್ ವ್ಯಕ್ತಾಯಾಂ ವಾಚಿ– ಧಾ.ಸಕ. ಕರ್ತರಿಲಟ್. ಪರ. ಪ್ರ. ಏ.। ಸೂ। ಲಟ್ ಸ್ಮಇತಿ ಸ್ಮಯೋಗಾದ ತೀತಾರ್ಥತ್ವಮ್। ಹೇ ರಾಜನ್, ಮುಮುಕ್ಷುಭಿಃ ಸಂಸಾರ ದುಃಖಾನ್ಮೋಕ್ತುಮಿಚ್ಛುಭಿಃ, ವರ್ಣಾನಾಂ ಬ್ರಾಹಣಾ ದೀನಾ ಮಾಶ್ರಮಾಣಾಂ ಬ್ರಹ್ಮಚರ್ಯಾದೀನಾಂ ಚೋಚಿತಾ ಯೋಗ್ಯಾಃ, ಧರ್ಮಾಃ ಅಧ್ಯಯನ ಗುರುಕುಲ ವಾಪಾದಯಃ, ನಹಾತವ್ಯಾ ನತ್ಯಾಜ್ಯಾಃ। ಅನನುಷ್ಠಾನೇ ಪ್ರತ್ಯವಾಯ ಶ್ರವಣಾದಿತಿ ಭಾವಃ ॥೪೩॥

**ಇತ್ಯುಕ್ತಸ್ಸ ಮಹೀಭರ್ತ್ರಾಭಟ್ಟ ಸ್ಸಾಹ ವಿಶಂಕಿತಃ ।**
**ವರ್ಣಾಶ್ರಮೋಚಿತಾಧರ್ಮಾ ನ ಹಾತವ್ಯಾಮುಮುಕ್ಷುಭಿಃ ॥೪೩॥**

ಅರ್ಥ:– ಇತಿ = ಈ ಪ್ರಕಾರವಾಗಿ ಮಹೀ, ಭರ್ತ್ರಾ = ಭೂಮಿಗೆ, ಸ್ವಾಮಿಯಾದ ಅರಸನಿಂದ ಉಕ್ತಃ = ಹೇಳಸಿಕೊಳ್ಳಲ್ಪಟ್ಟಂಥಾ ಸಃ = ಅಂಥಾ ಭಟ್ಟ = ಭಟ್ಟಕುಮಾರನು ಅವಿಶಂಕಿತಃ (ಸನ್) = (ಆ ರಾಜನ ದೆಸೆಯಿಂದಲು, ಬೌದ್ಧಜನರ ದೆಸೆಯಿಂದಲು ಭಯಪಡದವನಾಗಿ ಆಹಸ್ಮ = ಮಾತನಾಡಿದನು. (ಹೇ ರಾಜನ್ = ಎಲೈ ಅರಸನೇ) ಮುಮುಕ್ಷುಭಿಃ = (ಸಂಸಾರ ದುಃಖದ ದೆಸೆಯಿಂದ) ಮುಕ್ತಿಯನ್ನು ಇಚ್ಛಿಸುವ ಜನರಿಂದ ವರ್ಣ, ಆಶ್ರಮ, ಉಚಿತಾಃ = ಬ್ರಾಹ್ಮಣಾದಿ ವರ್ಣಗಳು, (ಬ್ರಹ್ಮಚರ್ಯಾಶ್ರಮಗಳು – ಇವುಗಳಗೆ ಅರ್ಹಗಳಾದ ಧರ್ಮಾಃ = ಧರ್ಮಗಳು ನಹಾತವ್ಯಾಃ = ಬಿಡಲ್ಪಡಲು ಅರ್ಹಗಳಲ್ಲ (ಬಿಟ್ಟರೆ ಪ್ರತ್ಯವಾಯಿವುಂಟೆಂತ ಭಾವ) ॥೪೩॥

ವೇದಾಇತಿ॥ ವೇದಾಃ ಪ್ರಮಾಣಂ ಯಥಾರ್ಥಜ್ಞಾನ ಜನಕಾಃ, ಇತ್ಯೇವಂ ರೂಪಂ, ಅಸ್ಮಾಕಂ ಮತಂ, ದೇವೇನಪರಮಾತ್ಮನಾನು ಶಿಕ್ಷಿತ ಮಾಜ್ಞಪ್ತಮ್। ಗತಿಸುಖ ಸ್ಥಾನಂ, ಇಚ್ಛಿದ್ಭಿಃ, ಪುರುಷೈಃ, ಸೌಗತಂ ಬೌದ್ಧ ಸಂಬಂಧಿ, ಮತಂ ಚೈತ್ಯನ ನಂದನಾದಿ ಕರ್ತವ್ಯ ಮಿತ್ಯೇವ ಮಾದಿರೂಪಂ ಹಾತವ್ಯಂ ತ್ಯಾಜ್ಯಮ್ ॥೪೪॥

**ವೇದಾಃ ಪ್ರಮಾಣ ಮಿತ್ಯಸ್ಮನ್ಮತಂ ದೇವಾನುಶಿಕ್ಷತಮ್।**
**ಹಾತವ್ಯಂಗತಿಮಿಚ್ಛದ್ಭಿಃ ಪುರುಷೈ ಸ್ಸೌಗತಂ ಮತಮ್ ॥೪೪॥**

ಅರ್ಥ:- ವೇದಾಃ=ವೇದಗಳು ಪ್ರಮಾಣಂ=ಯಥಾರ್ಥಜ್ಞಾನ ಜನಕಗಳು ಇತಿ=ಈ ಪ್ರಕಾರವಾಗಿ ಅಸ್ಮತ್, ಮತಂ=ನಮ್ಮಮತವು ದೇವ, ಅನುಶಿಕ್ಷಿತಂ= ಪರಮಾತ್ಮನಿಂದ ಆಜ್ಞಪ್ತವಾದುದು ಗತಿಂ=ಉತ್ತಮ ಸುಖಸ್ಥಾನವನ್ನು ಇಚ್ಛಿದ್ಭಿಃ=ಅಪೇಕ್ಷಿಸುವ ಜನರಿಂದ ಸೌಗತಂ = ಬೌದ್ಧ ಸಂಬಂಧಿಯಾದ ಮತಂ = ಮತವು ಹಾತವ್ಯಂ = ಬಿಡಲ್ಪಡತಕ್ಕುದು ॥೪೪॥

ಯದೀತಿ॥ ಹೇಕ್ಷ್ಮೇಶ ಭೂಪತೇ, ತ್ವಂ ಯದಿಯರ್ಹಿ, ಪ್ರಸಿದಸಿ ಅಸ್ಮಾಕಂ ಪ್ರಸನ್ನೋಭವಸಿ; ತರ್ಹಿ, ಸಯಂ ಸೌಗತಾನ್ ಬೌದ್ಧಾನ್ ವಿಜಯಾ ಮಹೇ ಪರಾಭಾವ ಯಾಮಃ। ಜೀಜಯೇ – ಧಾ.ಸಕ. ಕರ್ತರಿಲಟ್. ಉ.ಬ.। ಸೂ। ವಿಪರಾಭ್ಯಾಂ ಜೇರಿತಾತ್ಮನೇ ಪದಮ್। ವರ್ತಮಾನ ಸಾಮೀಪ್ಯಾದ್ವರ್ತ ಮಾನವದ್ವ್ಯಪದೇಶಃ । ಷದ್ಲೃವಿ ಶರಣಗತ್ಯವ ಸಾದ ನೇಷು – ಧಾ. ಕರ್ತರಿಲಟ್. ಪರ.ಮ.ಏ। ಪ್ರಾಪಸೃಷ್ಟತ್ವಾದನು ಕೂಲೇಚ್ಛಾರ್ಥಕತ್ವಮ್। ನಚೇತ್ ನಚೇಷ್ಯಾಮ ಶ್ಚೇತ್, ಅಸ್ಮಾನ್, ಅಹ್ನಾಯ ಶೀಘ್ರೇಷು। ನಿ– ಸ್ರಾಗ್ದ್ಧಿತ್ಯಂಜ ಸಾಹ್ನಾಯ ದ್ರಾಜ್ಮ್ರೀಂ ಕ್ಷುಸಪದಿದ್ರುತೇ ಇತ್ಯಮರಃ। ವಹ್ನೌವಗ್ನೌ ನಿಶ್ಚಯಾತ್, ವಿಚಾರ ಮಂತರೇಣ, ಪ್ರವೇಶಯ ಪ್ರವಿಷ್ಟಾನ್ ಕಾರಯ। ವಿಶಪ್ರವೇಶನೇ ಧಾ.ಸಕ. ಣಿಜಂತಃ ಕರ್ತರಿಲಟ್. ಪರ. ಮ. ಏ. ॥೪೫॥

**ಯದಿ ಪ್ರಸೀದಸಿ ಕ್ಷ್ಮೇಶ ಸೌಗತಾ ನ್ವಿಜಯಾಮಹೇ ।**
**ಪ್ರವೇಶಯ ನಚೇದ ಸ್ಮಾನ್ವಹ್ನಾವಹ್ನಾಯ ನಿಶ್ಚಯಾತ್ ॥೪೫॥**

ಅರ್ಥ:- ಹೇ, ಕ್ಷ್ಮಾ ಈಶ = ಎಲ್ಲೈ ಭೂಮಿಗೆ ಅಧಿಪತಿಯಾದ ಅರಸನೇ (ತ್ವಂ = ನೀನು) ಯದಿ = ಯಾವ ಪಕ್ಷದಲ್ಲಿ ಪ್ರಸೀದಸಿ = ಪ್ರಸನ್ನವಾಗುತ್ತೀಯಾ (ತರ್ಹಿ = ಆ ಪಕ್ಷದಲ್ಲಿ ವಯಂ = ನಾವು) ಸೌಗತಾನ್ = ಬೌದ್ಧರನ್ನು ವಿಜಯಾಮಹೇ

= ಗೆಲಿಯುತ್ತೇವೆ. ನಚೇತ್ = ಬೌದ್ಧರನ್ನು ಜಯಿಸದಿರುವ ಪಕ್ಷದಲ್ಲಿ ಅಸ್ಮಾನ್ = ನಮ್ಮನ್ನು ಅಹ್ನಾಯ = ಶೀಘ್ರವಾಗಿ ವಹ್ನೌ = ಅಗ್ನಿಯಲ್ಲಿ ನಿಶ್ಚಿಯಾತ್ = ಸಂಶಯವಿಲ್ಲದೆ ಪ್ರವೇಶಯ = ಪ್ರವೇಶ ಮಾಡಿಸು ॥೪೫॥

ಇತೀತಿ॥ ಇತ್ಯೇವಂ, ಭಟ್ಟಸ್ಯವಚಃ ವಾಕ್ಯಂ, ಶ್ರುತ್ವಾ, ನಪೋ ರಾಜಾ ವಿಸ್ರಂಭ್ರೇಣ ವಿಶ್ವಾಸೇನ, ಹೇ ಭಟ್ಟ, ತ್ವಂ, ಯದಿತಾನ್ ಸೌಗತಾನ್, ಜೇಷ್ಯಸಿ ಪರಾಭಾವಯಿಷ್ಯಸಿ: ತರ್ಹಿ, ಅಹಂ, ತಾನ್ ಪರಾಜಿತಾನ್ ಬೌದ್ಧಾನ್, ವಹ್ನೌ ಅಗ್ನೌ ವೇಶಯೇ ಪ್ರವಿಷ್ಟಾನ್ ಕಾರಯೇ। ಇತ್ಯೇವಂ ಅಬ್ರವೀತ್। ಬ್ರೂಞ್ ವ್ಯಕ್ತಾಯಾಂ ವಾಚಿ– ಧಾ.ಣಿಜಂತಃ. ಕರ್ತರಿಲಙ್. ಪರ. ಪ್ರ. ಏ. । ವಿಶಪ್ರವೇಶನೇ – ಧಾ. ಣಿಜಂತಃ ಕರ್ತರಿಲಜ್. ಪರ. ಮ.ಏ। ॥೪೬॥

**ಇತಿಭಟ್ಟವಚಃ ಶ್ರುತ್ವಾವಿಸ್ರಂಭೇಣಾಬ್ರವೀ ನ್ನೃಪಃ ।**
**ಯದಿ ಜೇಷ್ಯಸಿ ತಾನ್ವ ಹ್ನೌ ವೇಶಯೇ ಸೌಗತಾನಿತಿ ॥೪೬॥**

ಅರ್ಥ:- ಇತಿ=ಈ ಪ್ರಕಾರವಾಗಿ ಭಟ್ಟವಚಃ=ಭಟ್ಟಕುಮಾರನ ವಾಕ್ಯವನ್ನು ಶ್ರುತ್ವಾ=ಕೇಳಿ ನೃಪಃ=ಅರಸನು ವಿಸಂಭ್ರೇಣ=ವಿಶ್ವಾಸದಿಂದ (ಹೇ ಭಟ್ಟ=ಎಲೈ ಭಟ್ಟನೇ ತ್ವಂ=ನೀನು) ಯದಿ=ಯಾವ ಪಕ್ಷದಲ್ಲಿ ತಾನ್=ಅಂಥಾ ಸೌಗತಾನ್=ಬೌದ್ಧರನ್ನು ಜೇಷ್ಯಸಿ= ಜಯಸುವಿಯೋ (ತರ್ಹಿ=ಆ ಪಕ್ಷದಲ್ಲಿ ಅಹಂ=ನಾನು) ತಾನ್=ಆ ಪರಾಜಿತರಾದ ಬೌದ್ಧರನ್ನು ವಹ್ನೌ=ಅಗ್ನಿಯಲ್ಲಿ ವೇಶಯೇ=ಪ್ರವೇಶಮಾಡಿಸುವೆನು. ಇತಿ=ಈಪ್ರಕಾರವಾಗಿ ಅಬ್ರವೀತ್=ಮಾತನಾಡಿದನು॥೪೬॥

ತಸ್ಯೇತಿ॥ ತಸ್ಯಬೌದ್ಧಾದಿಷ್ಠಿತ ದೇಶಾಧಿಪತೇಃ, ರಾಜ್ಞಃ, ವಚಃ ವಾಕ್ಯಂ, ಶ್ರುತ್ವಾ, ವಿಸ್ರಬ್ಧಃ ವಿಶ್ವಾಸಂ ಪ್ರಾಪ್ತಃ। ಸತಾದೃಶಃ, ಮಹೀಸುರೋ ಬ್ರಾಹ್ಮಣೋಭಟ್ಟಃ ಸನಾರಾಯಣ ಭಟ್ಟಃ ನಾರಾಯಣ ಭಟ್ಟ ನಾಮಕೇ ನಾನು ಜೇನ ಸಹಿತ ಸ್ಸನ್, ಸಶಬರಃ ಶಬರನಾಮಕೇನ ಪಿತ್ರಾಚ ಸಹಿತಸ್ಸನ್ ಭೃಶಮ ತ್ಯಂತಂಮುಮುದೇ ಸಂತೋಷಂಪ್ರಾಪ್ತಃ। ತ್ರಯೋಽಪಿ ಸಂತುತುಷುರಿತಿ ಭಾವಃ। ಮುದಹರ್ಷೇ– ಧಾ.ಅಕ. ಕರ್ತರಿ ಲಟ್. ಆತ್ಮ. ಪ್ರ. ಏ ॥೪೭॥

**ತಸ್ಯ ರಾಜ್ಞೋ ವಚಶ್ರುತ್ವಾವಿಸ್ರಬ್ಧಃ ಸಮಹೀಸುರಃ।**
**ಸನಾರಾಯಣ ಭಟ್ಟಸ್ಸಶಬರೋ ಮುಮುದೇ ಭೃಶಮ್॥೪೭॥**

ಅರ್ಥ:- ತಸ್ಯ=ಆ ಬೌದ್ಧರಿರುವ ದೇಶಕ್ಕೆ ಅಧಿಪತಿಯಾದ ರಾಜ್ಞಃ=ಅರಸನ ವಚಃ=ವಾಕ್ಯವನ್ನು ಶ್ರುತ್ವಾ=ಕೇಳಿ ವಿಸ್ರಬ್ಧಃ=ವಿಶ್ವಾಸ ಪಟ್ಟಂಥಾ ಸಃ=ಅಂಥಾ ಮಹೀಸುರಃ=ಬ್ರಾಹ್ಮಣನಾದ ಭಟ್ಟಕುಮಾರನು ಸನಾರಾಯಣಭಟ್ಟಃ (ಸನ್)=ತಮ್ಮನಾದ ನಾರಾಯಣ ಭಟ್ಟನಿಂದ ಸಹಿತನಾಗಿ ಸಶಬರಃ (ಸನ್)=(ತಂದೆಯಾದ) ಶಬರನಿಂದ ಸಹಿತನಾಗಿ ಭೃಶಂ=ಅತ್ಯಂತವಾಗಿ ಮುಮುದೇ = ಸಂತೋಷಪಟ್ಟನು (ಮೂರುಜನರು ಸಂತುಷ್ಟರಾದರೆಂತ ಭಾವ)

ಬೌದ್ಧಾನಾಂ ಜಯೇ ಪ್ರಯತ್ನಮಾಹ – ಅಪಕ್ಷಪಾತಿ ನೀತಿ॥ ಕ್ಷತ್ರೇ ರಾಜ್ಞೇ, ಪಕ್ಷೇ ಏಕಸ್ಮಿನ್ಪಕ್ಷೇ ಪಾತಃ ಸ್ವೀಯತಾಭಿಮಾನಃ ಪಕ್ಷಪಾತಃ ಸೋಽಸ್ಯಾಸ್ತೀತಿ ಪಕ್ಷಪಾತೀ ಸನಭವ ತೀತ್ಯಪಕ್ಷಪಾತೀ ತಸ್ಮಿನ್ ಸತಿ, ಪಕ್ಷದ್ವಯೇಽಪಿ ಸಮದೃಷ್ಟಿಯುಕ್ತೇ ಸತೀತ್ಯರ್ಥಃ । ಸಭಟ್ಟ, ತರ್ಕೈ ದೂರ್ಷಣಾನು ಮಾನೈಃ ಕರ್ಕಶಾಂ ನಿರಾ ಕರ್ತುಮಶಕ್ಯಾಂ, ಬೌದ್ಧಶಾಸ್ತ್ರಂ ನಿಕೃಂತತಿಛಿನತ್ತೀತಿ ತಾದೃಶೀಂ, ಶಾಬರಸ್ಯ ಶಬರ ನಾಮಕ ಸ್ವತಾತ ಸಂಬಂಧಿನೋಭಾಷ್ಯಸ್ಯ ಜೈಮಿನಿ ಸೂತ್ರ ಭಾಷ್ಯಸ್ಯ, ಟೀಕಾಂ ವ್ಯಾಖ್ಯಾನ ಗ್ರಂಥಂ ಚಕ್ರೇಕೃತವಾನ್। ಡುಕೃಞ್ ಕರಣೇ-ಧಾ.ಸಕ.ಕರ್ತರಿಲಿಟ್. ಆತ್ಮ.ಪ್ರ.ಏ ॥೪೮॥

ಅಪಕ್ಷಪಾತಿನಿ ಕ್ಷತ್ರೇ ಸಟೀಕಾಂ ತರ್ಕ ಕರ್ಕಶಾಂ।
ಚಕ್ರೇ ಶಾಬರಭಾಷ್ಯಸ್ಯ ಬೌದ್ಧಶಾಸ್ತ್ರ ನಿ ಕೃಂತನೀಂ॥೪೮॥

ಅರ್ಥ:- ಬೌದ್ಧರನ್ನು ಜಯಿಸಲು ಯತ್ನಿಸಿದ ರೀತಿಯನ್ನು ಹೇಳುತ್ತಾರೆ- ಕ್ಷತ್ರೇ=ಅರಸನು ಅಪಕ್ಷಪಾತಿನಿ(ಸತಿ)=ಒಂದು ಪಕ್ಷದಲ್ಲಿ ಸ್ವೀಯುತ್ವಾಭಿ ಮಾನವಿಲ್ಲದವನಾಗಿರಲಾಗಿ ಸಃ=ಆಭಟ್ಟನು ತರ್ಕಕರ್ಕಶಾಂ= ದೂಷಣಾನುಮಾನಗಳಿಂದ ಕಠಿನವು (ನಿರಾಕರಿಸಲಶಕ್ಯವು) ಆದ ಬೌದ್ಧಶಾಸ್ತ್ರ, ನಿಕೃಂತನೀಂ=ಬೌದ್ಧ ಶಾಸ್ತ್ರವನ್ನು ಭೇದಿಸುವಂಥಾ ಶಾಬರ, ಭಾಷ್ಯಸ್ಯ-ಶಬರ ಸಂಬಂಧಿಯಾದ ಜೈಮಿನಿಸೂತ್ರ ಭಾಷ್ಯಕ್ಕೆ ಟೀಕಾಂ=ವ್ಯಾಖ್ಯಾನವನ್ನು ಚಕ್ರೇ=ಮಾಡಿದನು ॥೪೮॥

ನಾರಾಯಣೇನೇತಿ॥ ಕದಾಚಿತ್, ಸಭಟ್ಟಃ, ನಾರಾಯಣೇನ ಭಟ್ಟೇನ ಸಮೇಯಿವಾನ್ ಯುಕ್ತಸ್ಸನ್, ಪುರಸ್ಯ ರಾಜಾಧಿಷ್ಠಿತನಗರಸ್ಯ ದಾರಿದ್ವಾರೇ, ತೋರಣಸ್ಯ ಪುರಬಹಿರ್ದ್ವಾರಸ್ಯ ಅಗ್ರೇ ಊರ್ಧ್ವಭಾಗೇ, ಪ್ರತಿಕಾಂ ಸೌಗತ್ಯೆ ಸ್ಸಾಕ ಮಹಂ ವಾದಂ ಕರಿಷ್ಯಾಮೀ ತ್ಯಭಿಪ್ರಾಯಬೋಧಿಕಾಂ, ಅಪತಾಕಯತ್ ಪತಾಕಾಮಿವಾಂಕಯಾ ಮಾಸ। ಪತಾಕಶಬ್ದಾತ್ತತ್ಕರೋ ತೀತ್ಯರ್ಥೇ ಣೇಚಿ ಲಙ್ ಪರಸ್ಮೈಪದ ಪ್ರಥಮ ಪುರುಷೈಕ ವಚನಮ್ ॥೪೯॥

**ನಾರಾಯಣೇನ ಭಟ್ಟೇನ ಸ ಕದಾಚಿ ತ್ಸ ಮೇಯಿ ವಾನ್।**
**ತೋರಣಾಗ್ರೇಪುರದ್ವಾರಿ ಪತ್ರಿಕಾಮ ಪತಾಕಯತ್ ॥೪೯॥**

ಅರ್ಥ:- ಕದಾಚಿತ್ = ಒಂದಾನೊಂದು ಕಾಲದಲ್ಲಿ ಸಃ = ಆಭಟ್ಟನು ನಾರಾಯಣೇನ ಭಟ್ಟೇನ = ನಾರಾಯಣಭಟ್ಟನಿಂದ ಸಮೇಯಿವಾನ್ (ಸನ್) = ಯುಕ್ತನಾಗಿ ಪುರ ದ್ವಾರಿ = ಪಟ್ಟಣದ ಬಾಗಿಲಿನಲ್ಲಿ ತೋರಣ ಅಗ್ರೇ = ಊರು ಹೊರ ಬಾಗಿಲಿನ ಮೇಲ್ಭಾಗದಲ್ಲಿ ಪತ್ರಿಕಾಂ = (ಬೌದ್ಧರೊಡನೆ ವಾದ ಮಾಡುವೆ ನೆಂಬ ಅರ್ಥವನ್ನು ತಿಳಿಯಮಾಡುವ) ಪತ್ರಿಕೆಯನ್ನು ಅಪತಾಕಯತ್ = ಪತಾಕೆ ಯನ್ನೋಪಾದಿಯಲ್ಲಿ ಹಚ್ಚಿಸಿದನು ॥೪೯॥

ವಹ್ನೀತಿ॥ ಕುಮಾರಃ ವಹ್ನೌಪ್ರವೇಶ ಏವಗ್ಲಹಃ ಪಣಃ ಪರಾಜಿತೇನ ಕಾರ್ಯತಯಾ ಪ್ರತಿಜ್ಞಾ ವಿಷಯೋಯಸ್ಯಾಸ್ತಯಾ, ವಿತಂಡಯಾ ಸ್ವಪಕ್ಷ ಸ್ಥಾಪನ ರಹಿತಯಾ ಪರಪಕ್ಷ ನಿರಾಕರಣ ಮಾತ್ರ ಫಲಕ ಕಥಯಾ, ಮಾಧ್ಯಮಿಕಾನ್ ಬೌದ್ಧಾನ್, ನಿಗೃಹ್ಯವಿಜಿತ್ಯ, ಶ್ರುತೀನಾಂ ವೇದಾನಾಂ ಅಪಹ್ನವತಃ ಅಪ್ರಾಮಾಣ್ಯ ಕಥನಾದಿ ರೂಪೌದ ಪಚಾವತ್, ನಷ್ಟಂಕ್ಷೀಣ ಮಾಯುರ್ಯೇಷಾಂ ತಾನ್, ಮಾಧ್ಯಮಿಕಾನ್ ಅಹ್ನಾಯ ಶೀಘ್ರಂ, ವಹ್ನೌ ಗಮಯಾಂಚಕಾರ ಪ್ರವೇಶಯಾ ಮಾಸ ॥ ಗಮಲೃ ಗತೌ - ಧಾ. ಸಕ. ಣಿಜಂತಃ ಕರ್ತರಿ ಲಟ್. ಪರ. ಪ್ರ. ಏ. ॥೫೦॥

**ವಹ್ನಿ ಪ್ರವೇಶ ಗ್ಲಹಯಾ ಕುಮಾರೋ ವಿತಂಡಯಾ ಮಾಧ್ಯಮಿಕಾನ್ನಿ ಗೃಹ್ಯ।**
**ನಷ್ಟಾಯುಷೋಽಪವಹ್ನಾವತ ಶ್ರುತೀ ನಾಮಹ್ನಾಯ ವಹ್ನೌ ಗಮಯಾಂಚಕಾರ ॥೫೦॥**

